# ಕೊಡಗು ಸಂಗಾತಿ

ಫೆಬ್ರವರಿ 16 ರಿಂದ 29, 2000 ಪಾಕ್ಷಿಕ ಪತ್ರಿಕೆ (ಮಾಯಿ 2 ರಿಂದ 15, 2000)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K. R. N. N. 240 ಸಂಪುಟ : 4 ಸಂಚಿಕೆ : 4 ಪುಟಗಳು : 24 ಬೆಲೆ ರೂ. : 6-00




ಚಿತ್ರ ರಚನೆ : ತಡಿಯಪ್ಪನ ಭವ್ಯ ಕುಮಾರ ಜಯ, ಮೈಸೂರು

**ಪಶ್ಚಿಮ ಘಟ್ಟದ ಗೌಡ ಜನಾಂಗದ ಮದುವೆಯ ಸಂಕೇತವಾದ ಹಸೆ ಬರೆದಿರುವ ಒಂದು ನೋಟ. ಹಾಗೂ ಸಂತೋಷದಲ್ಲಿ ನರ್ತಿಸುತ್ತಿರುವ ದೃಶ್ಯ**

## ಕಾವೇರಿ ನಾಡು ಸಹಕಾರಿ ಸಂಸ್ಥೆ

ಕಾಡುಕರೇನ ಹಳ್ಳಿ, ಮದೇವಪುರ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ



ಈ ಮೇಲ್ಕಂಡ ಸಹಕಾರಿ ಸಂಸ್ಥೆಯಲ್ಲಿ ಈಗಾಗಲೇ ಸದಸ್ಯರಾಗಿ ನಿವೇಶನ ಪಡೆದುಕೊಂಡಿರುವುದು ಸರಿಯಷ್ಟೆ, ನಿವೇಶನದ ಭೂ ಪರಿವರ್ತನೆ (ಅಲಿನೇಷನ್) ಕೆಲಸಗಳು ಈಗಾಗಲೇ ಮುಗಿದಿದ್ದು ರಿಜೇಸ್ಟ್ರೇಶನ್ ಕೆಲಸ ಪ್ರಾರಂಭವಾಗಿದೆ. ನಿವೇನದಾರರು ಆದಷ್ಟು ಶೀಘ್ರವಾಗಿ ತಮ್ಮ ನಿವೇಶನವನ್ನು ನೋಂದಾಣಿಸ ಬೇಕೆಂದು ಈ ಮೂಲಕ ವಿನಂತಿಸುತ್ತೇನೆ. ಮುಂಗಡ ಹಣ ನೀಡಿ ಬಾಕಿ ಉಳಿಸಿ ಕೊಂಡಿರುವ ನಿವೇಶನದಾರರು ಕೂಡಲೇ ಪೂರ್ತಿ ಹಣ ನೀಡಿ ನೋಂದಾಣಿಸುವಂತೆ ಕೋರಿಕೆ. ಸಕಾಲದಲ್ಲಿ ಬಂದು ರಿಜಿಸ್ಟ್ರೇಶನ್ ಮಾಡಿಕೊಳ್ಳದಿದ್ದರೆ ತಾವು ನೀಡಿದ ಮುಂಗಡ ಹಣವನ್ನು ಯಾವುದೇ ಕಾರಣಕ್ಕೂ ಹಿಂತಿರುಗಿಸಲಾಗುವುದಿಲ್ಲವೆಂದು ಈ ಮೂಲಕ ತಿಳಿಯ ಪಡಿಸುತ್ತಿದ್ದೇನೆ. ಸಹನೆ ನಮ್ಮದು ಸಹಕಾರ ನಿಮ್ಮದು.

**ಅಮ್ಮಾಜೀರ ಪೊನ್ನಪ್ಪ, ಸಂಸ್ಥಾಪಕ**
**ಕಾವೇರಿ ನಾಡು ಸಹಕಾರಿ ಸಂಸ್ಥೆ, ಬೆಂಗಳೂರು.**

---

## ಬೆಂಗಳೂರಿನ ಕಾವೇರಿನಾಡು ವಿದ್ಯಾಸಂಸ್ಥೆಯಲ್ಲಿ ಕೊಡಗು ಸಂಗಾತಿ ವತಿಯಿಂದ ಸ್ಕಾಲರ್ ಶಿಪ್ ನಿಧಿ ಸ್ಥಾಪನೆ

"ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆಯ ಸಂಪಾದಕಿ ಪಟ್ಟಡ ಶೀಲಾಮಣಿ ಮತ್ತು ಗೌರವ ಸಂಪಾದಕ ಪಟ್ಟಡ ಪ್ರಭಾಕರನವರು ಬೆಂಗಳೂರಿನ ಅಮ್ಮಾಜೀರ ಪೊನ್ನಪ್ಪ ನಿರ್ಮಿತ ಕಾವೇರಿ ವಿದ್ಯಾ ಸಂಸ್ಥೆಗೆ ರೂ -5000/- ರೂಪಾಯಿಗಳ ವಂತಿಗೆ ನೀಡಿ ವಿದ್ಯಾ ನಿಧಿಯೊಂದನ್ನು ಪ್ರಥಮ ಬಾರಿಗೆ ಹುಟ್ಟಿ ಹಾಕಿದ್ದಾರೆ. ಇದರಲ್ಲಿ ಬರುವ ಬಡ್ಡಿಯ ಮೊತ್ತವನ್ನು ಈ ಸಂಸ್ಥೆಯಲ್ಲಿ 10ನೇ ತರಗತಿಯಲ್ಲಿ ಉತ್ತಮ ಅಂಕ ಗಳಿಸಿ ಪಾಸಾದ ವಿದ್ಯಾರ್ಥಿಗಳಿಗೆ ನೀಡುವುದಾಗಿದೆ. ಸಧ್ಯಕ್ಕೆ 6ನೇ ತರಗತಿಯಲ್ಲಿ ಈ ವರ್ಷ ಅತೀ ಹೆಚ್ಚಿನ ಅಂಕಗಳನ್ನು ತೆಗೆದ ವಿದ್ಯಾರ್ಥಿಗಳಿಗೆ 3 ಬಹುಮಾನಗಳನ್ನು ನೀಡಲಾಗುವುದು.

ಪಟ್ಟಡ ಶೀಲಾಮಣಿ ಮತ್ತು ಪ್ರಭಾಕರ ದಂಪತಿಗಳ ಅವಿಸ್ಮರಣೀಯ ಈ ಸೇವೆಗೆ ಅನುದಿನವು ಶ್ರೀಕುಲ ದೇವ್ರು ವೆಂಕಟರಮಣನ ಕೃಪಾಕಟಾಕ್ಷ ಮತ್ತು ಶೃಂಗೇರಿ ಶಾರದಾಂಬೆಯ ಅನುಗ್ರಹವು ಸದಾ ಇರಲಿತ್ತೇಳಿ ಕಾವೇರಿ ನಾಡು ವಿದ್ಯಾ ಸಂಸ್ಥೆಯ ಪರವಾಗಿ ಮತ್ತೆ ನನ್ನ ವೈಯಕ್ತಿಕ ಅಭಿನಂದನೆಗಳು.

**ಶ್ರೀ ಅಮ್ಮಾಜೀರ ಪೊನ್ನಪ್ಪ, ಸಂಸ್ಥಾಪಕ**
**ಕಾವೇರಿ ನಾಡು ವಿದ್ಯಾ ಸಂಸ್ಥೆ, ಬೆಂಗಳೂರು.**

---

# ಒಳನೋಟ

2000, ಫೆ. 16-29 ರ ತನಕ




| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ | **ಬೈತಡ್ಕ ಜಾನಕಿ ಬೆಳ್ಯಪ್ಪ,** ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
| ಸಂಗಾತಿ ಚಿಹ್ನೆ ಮತ್ತು ಅರೆಭಾಷೆ ಕ್ಯಾಸೆಟ್ ಲಭ್ಯ | **ಪಾಂಡ್ಯನ್ ಕ್ಯಾಸೆಟ್ ಅಂಗಡಿ,** ಖಾಸಗಿ ಬಸ್ ನಿಲ್ದಾಣ, ಮಡಿಕೇರಿ **ಫೋನ್** : 08272/29620 |
| ಕುಶಾಲ ನಗರ | **ಕುಂಭಗೌಡನ ಸೋಮಣ್ಣ,** ಮುಗೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 **ಫೋನ್** : 08276/73370 |
| ಬೆಂಗಳೂರು ಮಹಾನಗರ | **ಅಮ್ಮಾಜೀರ ಪೊನ್ನಪ್ಪ,** 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, **ಫೋನ್** :080/6342822 |
| ಬೆಂಗಳೂರು ಮಹಾನಗರ | **ಕಲ್ಲುಮುಟ್ಲು ಬಸಪ್ಪ,** ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇ ಗೌಡ ನಗರ, ಬೆಂಗಳೂರು -19, **ಫೋನ್** : 080/6500946 |

**ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 6 ರೂ., ಅರ್ಧ ವಾರ್ಷಿಕ -75 ರೂ., ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.**

# ಸಂಪಾದಕೀಯ : ಓದುವ ಹವ್ಯಾಸ

ಯಾವುದೇ ಒಂದು ದೇಶ ಯಾ ಸಮಾಜ ಮೇಲ್ಮಟ್ಟದ ದೇಶ ಯಾ ಸಮಾಜ ಎಂದು ಕರೆಯಬೇಕಾದರೆ ಅಲ್ಲಿನ ಜನರ ಜ್ಞಾನಾರ್ಜನೆಯ ಅಳತೆಯ ಮೇಲೆ ಹೇಳಬಹುದು. ಹಿಂದಿನ ಕಾಲದಲ್ಲಿ ತಾಳೆ ಗರಿ ಅಥವಾ ಶಾಸನಗಳ ಮುಖಾಂತರ ಅಥವಾ ಬಾಯಿಯಿಂದ ಬಾಯಿಗೆ ಹೇಳಿ ಕೇಳಿ ತಿಳಿದುಕೊಳ್ಳುವ ಪರಿಸ್ಥಿತಿ ಇತ್ತು. ಈಗ ಮುದ್ರಣವನ್ನು ಕಂಡು ಹಿಡಿದು ಮುದ್ರಣ ಯಂತ್ರ ಹಾಗೂ ಗಣಕ ಯಂತ್ರ (Computer) ಗಳ ಮುಖಾಂತರ ಅಚ್ಚು ಮಾಡುವ ಸ್ಥಿತಿ ಬಂದಿರುವಾಗ ದೊಡ್ಡ ಸಾಗರಕ್ಕಿಂತಲು ಹೆಚ್ಚು ಪುಸ್ತಕಗಳು ಸಿಗುವಾಗ ಅದರಲ್ಲಿ ಕೋಟಿಗೊಂದರಷ್ಟು ಪುಸ್ತಕಗಳನ್ನು ಓದದಿದ್ದರೆ ಯಾವುದೇ ಮನುಷ್ಯನ ಜೀವನದಲ್ಲಿ ಅವುಗಳೇನ್ನಾ ಲಭ್ಯವಿದ್ದು ಉಪಯೋಗಿಸದೆ ಮರಣ ಹೊಂದಿದರೆ ಅದೆಷ್ಟು ನಷ್ಟ. ಪುನರ್‌ಜನ್ಮವಿದೆಯೋ ಇಲ್ಲವೋ ಎಂಬುದಕ್ಕೆ ಕ್ಲಿಷ್ಟವಾಗಿ ಉತ್ತರಿಸಲು ಯಾರಿಂದಲೂ ಸಾಧ್ಯವಿಲ್ಲ. ಹಾಗಿರುವಾಗ ಅಪಾರವಾದ ಪುಸ್ತಕದ ಉಪಯೋಗ ಮಾಡಲಿಕ್ಕೆ ಸಾಧ್ಯವಾಗದಿದ್ದರೂ ಅದು ಕೋಟಿಗೆ ಒಂದು ಭಾಗದಷ್ಟು ಓದದೆ ಇರುವ ವ್ಯಕ್ತಿಯ ಜೀವನ ಈ ದಿಶೆಯಲ್ಲಿ ವ್ಯರ್ಥವಲ್ಲವೇ?

ಮುಂದಿನ ಪೀಳಿಗೆ ವ್ಯವಸ್ಥಿತ ರೀತಿಯಲ್ಲಿ ತನ್ನ ಜೀವನವನ್ನು ರೂಪಿಸುವುದಕ್ಕೆ ಜ್ಞಾನ ಮುಖ್ಯ. ಜ್ಞಾನವೆಂದರೆ ಯಾವುದೇ ಪದವಿಯನ್ನು ಪಡೆದಾಕ್ಷಣ ಜ್ಞಾನಿ ಎಂದೆನಿಸಿಕೊಳ್ಳಲಾರ. ಈಗಿನ ಪದವಿ ಪರೀಕ್ಷೆಗಳು while collated ಜೀವನವನ್ನು ನಡೆಸುವುದಕ್ಕೆ ಒಂದು ಪರವಾನಿಗೆ ಮಾತ್ರ. ಅದರಿಂದ ಪ್ರಪಂಚದ ಎಲ್ಲಾ ಜ್ಞಾನವನ್ನು ಗಳಿಸುವುದಕ್ಕೆ ಎಡೆ ಇಲ್ಲ. ಯಾವ ಮನುಷ್ಯನಿಗೂ ಎಲ್ಲಾ ವಿಷಯದ ಜ್ಞಾವನ್ನೂ ಪೂರ್ತಿಯಾಗಿ ತಿಳಿಯುವುದಕ್ಕೆ ಸಾಧ್ಯವಿಲ್ಲ. ಆದರೆ ಯಾವುದಾದರೂ ಒಂದು ವಿಷಯದಲ್ಲಿ ಪೂರ್ಣವಾದ ಜ್ಞಾನವನ್ನು ಪಡೆಯಲು ಸಾಧ್ಯವಾಗದೇ ಹೋದರೂ ಆ ವಿಷಯದಲ್ಲಿ ಸ್ವಲ್ಪವಾದರೂ ಜ್ಞಾನ ಸಂಪಾದನೆಗೆ ಎಡೆ ಇರುತ್ತದೆ. ಆದುದರಿಂದ ಇವುಗಳನ್ನು ಸಾಧಿಸುವುದಕ್ಕೆ ಓದುಗಾರಿಕೆ ಮುಖ್ಯ ಸಾಧನ.

**ತಂದೆ ತಾಯಿಗಳು ಮಕ್ಕಳನ್ನು ಸ್ನೇಹಿತರ ಮನೆಗಳಿಗೆ ನೆಂಟರಿಷ್ಟರ ಮನೆಗಳಿಗೆ ಸಿನಿಮಾಕ್ಕೆ ಅಥವಾ ಊರುಗಳನ್ನು ನೋಡುವುದಕ್ಕೆ ಕರೆದುಕೊಂಡು ಹೋಗುತ್ತಾರೆ. ಆದರೆ ಮಕ್ಕಳನ್ನು ತಮ್ಮ ಊರಿನ ಗ್ರಂಥಾಲಯಕ್ಕೆ ಕರೆದುಕೊಂಡು ಹೋಗಿ ಅಲ್ಲಿರುವ ಸಾಂಸ್ಕೃತಿಕ ಕಲೆ, ವಿಜ್ಞಾನ, ಚರಿತ್ರೆ, ಭೂಗೋಳ ಹಾಗೂ ಇತರ ವಿಷಯಗಳಲ್ಲಿರುವ ಉತ್ತಮ ಪುಸ್ತಕ ಯಾ ಗ್ರಂಥಗಳನ್ನು ಮಗುವಿಗೆ ಪರಿಚಯ ಮಾಡಿಸಿ ಕೊಡುವ ಹವ್ಯಾಸವನ್ನು ಯಾವ ತಂದೆ ಯಾ ತಾಯಿ ಮಾಡುತ್ತಾರೆ.** ಗಿಡವಾಗಿ ಬಗ್ಗದು ಮರವಾಗಿ ಬಗ್ಗೀತೆ? ಎಂಬ ನಾಣ್ಣುಡಿಯಂತೆ ಮಗು ಚಿಕ್ಕಂದಿನಿಂದಲೇ ಓದುವ ಹವ್ಯಾಸವನ್ನು ರೂಢಿಸುವಂತೆ ತಂದೆ ತಾಯಿಗಳು ಮಾಡಿಸಿ ಕೊಡಬೇಕು. ಈಗಿನ ಈ ಬಿಡುವಿಲ್ಲದೆ ದುಡಿಯುವ ಕಾಲದಲ್ಲೂ ತಂದೆ ತಾಯಿಯಂದಿರು ತಮ್ಮ ಸಮಯದ ಶೇಕಡಾ 1 ಯಾ 2 ಭಾಗವನ್ನು ಮಕ್ಕಳು ಓದುವ ಅಭ್ಯಾಸವನ್ನು ಮಾಡಿಸುವುದಕ್ಕೆ ಪ್ರಯತ್ನಿಸಿದರೆ ಯುವ ಜನಾಂಗ ಸೋಮಾರಿಗಳಾಗಿ ಯಥಾಕಾಲ ಕಳೆದು ಹರಟೆಗಳಲ್ಲಿಯೋ ಇನ್ನಾವುದೇ ಸಮಾಜ ಘಾತುಕತನದ ಉಗ್ರಗಾಮಿಗಳಾಗುವುದನ್ನು ಸ್ವಲ್ಪವಾದರೂ ತಪ್ಪಿಸಬಹುದು. **ಇದು ಶಾಲೆ, ಪೋಷಕರು ಹಾ॥ ಊ ಸಮಾಜಗಳ ಜವಾಬ್ದಾರಿಯಾಗಿದೆ.** ಈ ರೀತಿ ಪ್ರಜ್ಞೆ ಬೆಳೆದರೆ ಮಾತ್ರ ಒಂದು ದೇಶ ಯಾ ಸಮಾಜ ಸುವ್ಯವಸ್ಥಿತ ಮೇಲ್ಮಟ್ಟದ ಸಮಾಜವಾದೀತು. ಈ ರೀತಿಯ ಚಿಂತನೆ ನಮ್ಮ ಸಮಾಜದ ಯಾರಿಗೆ ಎಷ್ಟು ಜನರಿಗಿದೆ ಎಂಬುದು ಸಂಗಾತಿಯ ಪ್ರಶ್ನೆ.

---

## ಕೊಡಗು ಸಂಗಾತಿ

ಹೇ...
ಕೊಡಗು ಸಂಗಾತಿ,
ಬೆಳಗಿರುವೆ ನಮ್ಮಯ್ಯ ಸಂಸ್ಕೃತಿ,
ನೀನು ನಮ್ಮ ಗೌಡ
ಜನಾಂಗದ ಜ್ಯೋತಿ,
ಆದುದರಿಂದ ಆಗಿರುವೆ
ನಮ್ಮಯ್ಯ ಅಚ್ಚುಮೆಚ್ಚಿನ ಪ್ರತಿ,

ನೀ....
ನಮ್ಮೆಲ್ಲರ ಸಂಗಾತಿ,
ತುಂಬಿರುವೆ ನಿನ್ನಯ್ಯ
ಉದರದಲ್ಲಿ ವಿಷಯಗಳ ಮಾಹಿತಿ,
ತೋರುವೆ, ತಿಳಿಸುವೆ ಗೌಡ
ಜನಾಂಗದ ಏಳಿಗೆಯ ರೀತಿ,
ನಿನ್ನಿಂದ ಬೆಳಗುತಿದೆ ನಮ್ಮಯ್ಯ ಸಂಸ್ಕೃತಿ.

## ಮೌನ - ಪ್ರೀತಿ

ಎದುರುಗಡೆ ಇತ್ತು ಕಾಗದ
ಕೈಯಲ್ಲಿ ಇತ್ತು ಪೆನ್ನು
ಬರೆಯಲಾಗದೆ ಹೋದೆ....
ಎದುರು ಗಡೆ ಇದ್ದ ಅವ
ಮನಸ್ಸಿನಲ್ಲಿ ಇತ್ತು ಮಾತು.
ಮಾತಾಗಿ ಬರಲಿಲ್ಲ ಹೊರಗಡೆ
ಸಂದಿಸುತಿದ್ದೆವು ದಿನಾ
ತಿಳಿಯದೆ ಇಬ್ಬರು
ಆದರೆ....
ಆ ಒಂದು ದಿನ ಆಯಿತು
ನಯನಗಳ ಸಮ್ಮಿಲನ
ಮುರಿದಿತ್ತು ಪ್ರೀತಿಯಮೌನ
ಮೂಡಿಸಿತ್ತು ಒಲವಿನ ಕಿರಣ

**ಕೂರನ ದಿನು, ಮೈಸೂರು**

---

## ನಗೆ ಹನಿ

**ರೋಗಿ :** ಕಳೆದ 23 ವರ್ಷದಿಂದ ಕೆಮ್ಮು ಡಾಕ್ಟರೆ

**ಡಾಕ್ಟರ್ :** ಪರ್‍ವಾಗಿಲ್ಲ ಬಿಡಿ. ಇನ್ನು 2 ವರ್ಷ ಕಳೆದರೆ 'ಬೆಳ್ಳಿ ಹಬ್ಬವನು' ಆಚರಿಸೋಣ

**ತುಂತಜೆ ಲತ ಉಲ್ಲಾಸ್, ಮೈಸೂರ್**

---

ವಿದ್ಯೆಯೆ ಅಧಿದೇವತೆ, ಜ್ಞಾನವೇ ದೇವರು - ಬನ್ನಿ ಆರಾಧಿಸೋಣ — ಪಟ್ಟಡ ಪ್ರಭಾಕರ

## ನಾ ಕಂಡಂತೆ ವಿಶಿಷ್ಟ ಕುಟುಂಬ

ಕೆಲಸದ ನಿಮಿತ್ತ ಬೆಂಗಳೂರಿನಲ್ಲಿ ವಾಸವಾಗಿರುವ ನಾನು ಮೂರು ದಿನಗಳ ಸೆಮಿನಾರ್‌ಗೋಸ್ಕರ ಮೈಸೂರಿಗೆ ಹೋಗಿದ್ದೆ. ಸಂಜೆ ಹೊತ್ತು ಕಳೆಯುವುದು ಬಹಳ ಬೇಸವೆನಿಸಿತು. ನಮ್ಮ 'ಕೊಡಗು ಸಂಗಾತಿ' ಪಟ್ಟಾಡ ಪ್ರಭಾಕರ ಅವರ ಮನೆಗೆ ಭೇಟಿ ಕೊಡಲು ನಿಶ್ಚಯಿಸಿದೆ. ಅದರಂತೆ ಅವರ ಮನೆಗೆ ದೂರವಾಣಿ ಕರೆ ನೀಡಿದೆ. ಅವರು ಕೊಟ್ಟ ವಿಳಾಸದಂತೆ ಅವರ ಮನೆ ಹುಡುಕಿ ಕೊಂಡು ಹೊರಟೆ. ಮಡಿಕೇರಿ ರಸ್ತೆಯ ಮೂಲಕ ಜಯಲಕ್ಷ್ಮಿಪುರಂ ಬಡಾವಣೆ ಒಳಗೆ ನುಗ್ಗುತ್ತಿದ್ದಂತೆ ವಿದ್ಯುತ್ ದೀಪ ನಂದಿತು. ಕಗ್ಗತ್ತಲೆಯಲ್ಲಿ ಕೊಡಗು ಸಂಗಾತಿಯವರ ಮನೆ ಎಲ್ಲಿ? ಎಂದು ಹತ್ತಿರದಲ್ಲಿ ಇದ್ದ ಅಂಗಡಿಯ ಮಾಲೀಕನ ಹತ್ತಿರ ಕೇಳಿದಾಗ, ದಢಾರನೆ ನನ್ನ ಬೈಕ್ ಮೇಲೆ ಒಬ್ಬ ಹುಟ್ಟು ಕುರುಡ ಬಂದು ಬಿದ್ದ 'ಸಾರ್' ಕೊಡಗು ಸಂಗಾತಿಯವರ ಮನೇನಾ, ಪ್ರಭಾಕರ್ ಸಾರ್‌ನ ಮನೆನಾ? ಬನ್ನಿ ನಾನು ತೋರಿಸುತ್ತೇನೆ ಎಂದ ಕೂಡಲೆ ನನಗೆ ಆಶ್ಚರ್ಯ, ಕಗ್ಗತ್ತಲೆಯಲ್ಲಿ ಕುರುಡನೆ ಮನೆ ತೋರಿಸುತ್ತೇನೆ ಎಂದಾಗ 'ನಿಜವಾಗಿ ಕೊಡಗು ಸಂಗಾತಿ ಎಷ್ಟು ಹೆಸರುವಾಸಿ ಎಂಬುದನ್ನು ಅರಿತೆ, ಹೇಗೂ ಸಿಕ್ಕಿತು. ಕದ ತಟ್ಟಿದ ಕೂಡಲೆ ಬಾಗಿಲು ತೆರೆದು ಆದರದ ಸ್ವಾಗತ ನೀಡಿದರು. ಅವರ ಆದರಾತೀಥ್ಯದ ನಂತರ ಅವರೆಲ್ಲರೂ ಕೊಡಗು ಸಂಗಾತಿಗೆ ಬಂದಿದ್ದ ಪತ್ರಗಳು, ಲೇಖನಗಳು ಮುಂತಾದವುಗಳನ್ನು ಎಡಿಟಿಂಗ್ ಮಾಡಲು ಕುಳಿತರು. ನಾನು ಜೊತೆಯಲ್ಲಿಯೇ ಕುಳಿತೆ. ರಾತ್ರಿ 12-00 ಗಂಟೆ ತನಕ ಈ ಕುಟುಂಬ ಸಂಗಾತಿಗಾಗಿ ಕಷ್ಟಪಡುವುದನ್ನು ಕಣ್ಣಾರೆ ಕಂಡು ಮನ ಕರಗಿತು. ಪ್ರತಿಯೊಂದು ಕೆಲಸವನ್ನು ಕೈಯಿಂದಲೆ (Manual) ಮಾಡುತ್ತಾರೆ. ಅವರ ಸೇವೆಯನ್ನು ಕುರಿತು ಓದುಗರಿಗೆ ತಿಳಿಸಬೇಕೆನ್ನಿಸಿತು.

ಸಂಜೆ ಪ್ರಭಾಕರನವರು ತಮ್ಮ ನಿತ್ಯದ ಬ್ಯಾಂಕ್ ಕೆಲಸ ಮುಗಿಸಿ, ಶೀಲಾಮಣಿಯವರು ಸಹ ಮನೆ ಕೆಲಸ ಮುಗಿಸಿ, ಜೊತೆಯಲ್ಲಿಯೇ ಅವರಿಗಿರುವ ಅಸ್ತಮ ಖಾಯಿಲೆಯನ್ನು ಲೆಕ್ಕಿಸದೆ, ಮಕ್ಕಳು ಕಾಲೇಜಿನ ಕೆಲಸವನ್ನು ಮಾಡಿಕೊಂಡು ಕೊಡಗು ಸಂಗಾತಿ ನಮ್ಮ ಜನಾಂಗದ ಸಂಘಟನೆ, ಐಕ್ಯತೆಯ ಮತ್ತು ಪತ್ರಿಕೆಯ ಉಳಿವಿಗಾಗಿ ಕಷ್ಟ ಪಡುವ ಈ ಕುಟುಂಬಕ್ಕೆ ನಾವು ಏನೇನು ಮಾಡುತ್ತಿಲ್ಲವಲ್ಲ ಅನ್ನಿಸಿತು. ಅವರು ನಮಗಾಗಿ ಕಷ್ಟ ಪಡುತ್ತಿರುವಾಗ ನಾವು ಅವರಿಗಾಗಿ ಮಾಡಬೇಕಾಗಿರುವುದು ನಮ್ಮ ಧರ್ಮ ಸಹ ಹೌದು. ಕಂತಿನ ಹಣ ಸರಿಯಾಗಿ ಕಟ್ಟಿ ಪುಸ್ತಕ ಕೊಂಡು ಓದುವುದು. ಇಷ್ಟು ಮಾಡಿದರೆ ನಮಗೆ ಸಿಗುವುದು ಅಪಾರ ಆನಂದ, ಸಂತಸ. ಅವರಿಗೆ ಸಿಗುವುದು ಕೇವಲ ತೃಪ್ತಿ ಮಾತ್ರ. ನಮಗೋಸ್ಕರ ನಮ್ಮ ಜನಾಂಗದ ಪತ್ರಿಕೆಗೋಸ್ಕರ ಸರ್ವಸ್ವವನ್ನು ತ್ಯಾಗ ಮಾಡುತ್ತಾ ಕಷ್ಟ ಪಡುವ ಅವರಿಗೆ ನಾವು ಇಷ್ಟು ಮಾಡಲಾಗದ ಏನೂ ಕ್ರೂರ ಮನಸಿನವರೇ? ಅಲ್ಲ ಜನ ನಿರ್ಗತಿಕರೆ? ಹೇಳಲು ಬಾರಿ ಸುಲಭ ಮಾಡಿತೋರಿಸುವುದು ಅಷ್ಟು ಸುಲಭವಲ್ಲ. ಈ ಲೇಖನವನ್ನು ಓದಿದ ಮೇಲಾದರೂ ನಮ್ಮದೆ ಆದ ಪತ್ರಿಕೆಯ ಉಳಿವಿಗಾಗಿ ಹಿರಿಯರು, ಕಿರಿಯರು, ಯುವಕ, ಯುವತಿಯರು ಹೆಗಲು ಕೊಡುತ್ತೀರೆಂದು ಆಶಿಸುವೆ.

"ಸಹಬಾಳ್ವೆಯ ಸಮ್ಮಿಲನವೆ ನಮ್ಮ ಧ್ಯೇಯ"

**ಜೈ ಕೊಡಗು ಸಂಗಾತಿ**

**ತೇನನ ರಾಜೇಶ್ ಸೋಮಣ್ಣ, ಬೆಂಗಳೂರು.**

---

## ಅಮಲೇರಿದ ಕಾರ್ಮಿಕನ ಹಾಡು

ದುಡಿವೆನು ನಾನು ಗಳಿಸುವೆನಿತ್ಯ
ಸಾಗುವೆ ಮದ್ಯದ ಅಂಗಡಿಗೆ ಸತ್ಯ ।
ಸುರಿಯುವೆ ಹಣ, ಅಲ್ಲಿಯೆನೋಡಿ ।
ಮದ್ಯವ ಸವಿದು ಮೆರೆವೆನು ಹಾಡಿ ॥೧॥

ನನ್ನ ಹಣವು ನನ್ನದು
ಮನೆಯವರಿಗೇಕೆ ಚಿಂತೆಯು
ಬೇಕಾದರೆ ದುಡಿಯಲಿ ಅವರು
ಉಣಲಿ ತಿನಲಿ ಸಾಯಲೀ ॥೨॥

ಸಾಲ ಏರಿದೆ ಒಡವೆ ಮಾರುವೆ
ಮಡದಿಗೆ ಬುದ್ದಿ ಕಲಿಸುವೆ
ನನಗಿದೆ ಜೀವನದಿ ಕೀರ್ತಿಯು
ಅವರದ್ದೆಲ್ಲ ಟೊಳ್ಳು ಜೀವನವು ॥೩॥

ಹಿಂದೆ ಭೂಮಿಯ ಒಡೆಯ ನಾ
ಮಾರಿದೆ ಸಾಲಕೆ ಗೆದ್ದಿಹೆನು
ನಷ್ಟದ ಚಿಂತೆಯಿಲ್ಲ, ಕಳ್ಳರ ಭಯವಿಲ್ಲ
ದುಡಿಯ ುವೆನಾ ಹಣಗಳಿಸುವೆ ॥೪॥

ಕಾರ್ಮಿಕ ಜನರಿಗೆ ಭಯವೆಲ್ಲಿ?
ಬೆಳೆ ರಕ್ಷಣೆಯ ಬಿಸಿಯಿಲ್ಲ
ಶ್ರೀಮಂತರು ಸಹ ಬೆದರುವರು
ಮನೆ ಬಳಿ ಬಂದು ಕರಿಯುವರು ॥೫॥

ನಾವೇ ಧನ್ಯರು ಜಗದಲಿ
ನಾವೇ ಸುಖಿಗಳು ನಾಡಲಿ
ಅಯ್ಯೋ ಏನಿದು ಪಾದ ಜಾರುತಿದೆ
ಬೀಳುವೆ ನಾನು ಭುವಿಯಮಡಿಲಿಗೆ ॥೬॥

(ಕುಡುಕನು ಏನೇನೊ ಒದರಿ, ಜಾರಿ ರಸ್ತೆ ಚರಂಡಿಗೆ ಬೀಳುವನು)

**ಕವಿ. ಯಂ. ಗಂಗಾಧರ ಗೌಡ**

**ವಾಣಿ ಕುಮಾರ್, ಮಂಡೆಕೋಲು, ಸುಳ್ಯ ದ.ಕ. ಜಿಲ್ಲೆ.**

**ಕೊಡಗು ಸಂಗಾತಿ, ಪಾಕ್ಷಿಕ ಅನ್ನು ಕೊಂಡು ಓದಿರಿ.**

# 1870ರಲ್ಲಿ ಗಲುಡ ಜನಾಂಗದ ಒಂದು ಕಟ್ಟು ಕಟ್ಲೆಯ ನೋಟ.

ಸನ್ 1870ನೇ ಯಿಸ್ವಿ ಮೇ ತಾರಿಕು 16 ಕ್ಕೆ ಸರಿಯಾದ ಪ್ರವೋಮಾಕ್ತಾ ಸಂವತ್ಸರದ ವೈಶಾಖ ಬಹುಳ ಒಂದನೆ ಚಂದ್ರವಾರದಲ್ಲು ಯಿದರ ಕೆಳಗೆ ರುಜು ಮಾಡಲ್ಪಟ್ಟಿರುವ ಗಲುಡುಗಳ ಮಹಾಜನಾಂಗಗಳು ಕಂತ್ತು ಮೂರ್ನಾಡು, ಕಾಂತ್ತೂರು ಗ್ರಾಮದಲ್ಲು ಮಾಡಲ್ಪಟ್ಟ ಮಾಹಜುರು ಯಾ ವಿವರ. ಗಲುಡುಗಳ ಪದ್ಧತಿ ಮೇಲೆ ಆಗುವಂತ್ತಾ ಸುಭ ಸೋಬಾನ ಲೇಸು. ಕಷ್ಟಕ್ಕೆ ಜನರು ತಂಮ ತಂಮ ಮನಸು ವಿಚ್ಛೆಕರಕವಾಗಿ ನಡಸುವ ಪದ್ಧತಿಗಳ ಮೊಸ್ಕೂಪ್ ಮಾಡಿ ವಂದೇ ರೀತಿ ನಡಕೊಳ್ಳುವುದಕ್ಕೆ ಕ್ಷೇಮ ಉಂಟೆಂದು ಯೋಚಿಸಿ ಯಿದಕ್ಕೆ ನಿಬಂಧನೆಗಳ ಉಂಟು ಮಾಡುವದಕ್ಕೋಸ್ಕರ ಗಲುಡುಗಳ ಸಭೆ ಕೂಡಿಸುವದಕ್ಕೆ ಕುಂಬು ಗಲುಡ್ರು ರಾಮೈಯ್ಯ ಗಲುಡ್ರು. ಕೆದಂಬಾಡಿ ಪುಟ್ಟೈಯ್ಯ ಗಲುಡ್ರು, ಉಳುವಾರದ ರಾಮಪ್ಪ ಗಲುಡ್ರು, ಈ ಮೂರು ಜನರು ಮೊಕ್ತೋ ಮನಸಿನಿಂದ ಕೊಡಗು ದೇಶದ ಸೆಕೆಂಡ್ ಅಶಿಸ್ಟೆಂಟ್ಸ್ ಸುಪರೆಂಟ್‌ಟೆಂಡ್ ರಾವ್ ಬಹದೂರ್‌ರಾದ ಮಾಹಾರಾಜ ಪುಚಿತ್ತರಾಜ ಮನ್ನಾ ರಾಜೇಶ್ರೀ ಚೆಪ್ಪುಡಿ ಸುಬ್ಬೈಯ್ಯನವರ ಸನ್ನಿದಿಯಲ್ಲು ಭಿನ್ನ ಪತ್ರಕ್ಕೆ ಕೇಳಿಕೊಂಡದ್ದಕ್ಕೆ ಸದ್ರಿ ಮೇರೆ ನಡುಸುವದಕ್ಕೆ ಅವರು ಸಂತ್ತೋಷ ಮನಸು ಉಳ್ಳವರಾಗಿಯಿದ್ದೂ ದಯ ಪಾಲಿಸಿದ ಹುಕುಂ ಪ್ರಾಕಾರ ಜಮೆಯಾದ ಜನರು.

1ನೆ ಕಟ್ಟೆಮನೆ ಕುಂಬುಗಲುಡ್ರು ರಾಮೈಯ್ಯ
2ನೆ ಕೆದಂಬಾಡಿ ಪುಟ್ಟಯ್ಯ ಗಲುಡ್ರು
3ನೆ ಉಳುವಾರದ ರಾಮಪ್ಪ ಗಲುಡ್ರು

**ತಾವುನಾಡು**

ಕುದುಪಜೆ ರಾಮೈಯ್ಯ ಗಲುಡ್ರು
ದೇಂಗೋಡಿ ಮೂಕೈಯ್ಯ ಗಲುಡ್ರು
ಮೂಲೆಮನೆ ಚಿನ್ನಯ್ಯ ಗಲುಡ್ರು
ಹೊಸೂರು ಸುಬ್ಬೈಯ್ಯ ಗಲುಡ್ರು
ಬೋಳ್ಳಡ್ಕ ಸುಬ್ಬೈಯ್ಯ ಗಲುಡ್ರು
ಪಳಂಗೋಟು ಸುಬ್ಬು ಗಲುಡ್ರು
ನಿಡುಬೆ ಕಿಷ್ಣಪ್ಪ ಗಲುಡ್ರು

**ಬೇಂಗು ನಾಡು**

ನಡುಬೆಟ್ಟು ಮೇದು ಗಲುಡ್ರು
ಕುಂಬಾಳ್ತಾನ ಸೋಮೈಯ್ಯ ಗಲುಡ್ರು
ಕುಂಞಳಿಮನೆ ಸೋಮೈಯ್ಯ ಗಲುಡ್ರು

**ಪಾಡಿ ನಾಲ್ಕು ನಾಡು**

ಕುಯ್ಯಮುಡಿ ಅಯ್ಯಂಣ ಗಲುಡ್ರು
ಚೆಂಡ್ರ ಮೇದು ಗಲುಡ್ರು
ಕುಂಬೇರ ಮೂಕೈಯ್ಯ ಗಲುಡ್ರು

**ಕಡಿಯತ್ತು ನಾಡು**

ಗುಡ್ಡೆ ಪೊನ್ನಪ್ಪ ಗಲುಡ್ರು
ಕಟ್ರತನ ದೇವಪ್ಪ ಗಲುಡ್ರು
ಬಾಕಿಲನ ಸೋಮಯ್ಯ ಗಲುಡ್ರು

**ಹೊರೂರು ನೂರೋಕ್ಲು ನಾಡು**

ಬಾಣೂರು ಚೆನ್ನಪ್ಪ ಗಲುಡ್ರು
ಬೈಚನ ದೇವೈಯ್ಯ ಗಲುಡ್ರು
ವೆಂಕನ ಅಪ್ಪೈಯ್ಯ ಗಲುಡ್ರು

**ಮೂಡಿಗೇರಿ ನಾಡು**

ಹಾರು ಬೈಲು ರಾಮೈಯ್ಯ ಗಲುಡ್ರು
ಪಾರೆ ಮಲ್ಲಪ್ಪ ಗಲುಡ್ರು

**ಕಗ್ಗೋಡು ನಾಡು**

ತೋರೆ ಯೀರಪ್ಪ ಗಲುಡ್ರು
ಮೂಲೆಮನೆ ದೊಡ್ಡೆಯ್ಯ ಗಲುಡ್ರು
ದೇಶ ಕೋಡಿ ತಂಮಂಣ್ಣ ಗಲುಡ್ರು
ಮಡೆಯನ ಕುಞಂಣ ಗಲುಡ್ರು
ಅಕ್ಕಾರಿ ತಿಮ್ಮಪ್ಪ ಗಲುಡ್ರು
ಕೋಲುಪೆ ರಾಮಣ್ಣ ಗಲುಡ್ರು

**ಮಡಿಕೇರಿ ಹೊರ ಮಲೆನಾಡು**

ಯಾಲ್ದಾಳು ಪುವಂಣ ಗಲುಡ್ರು
ಕೊಂಬಾರ ಲಿಂಗಪ್ಪ ಗಲುಡ್ರು
ಕೋಚನ ದೇವಪ್ಪ ಗಲುಡ್ರು
ಅಚ್ಚಿಪಟ್ಟಿರ ಮಾದು ಗಲುಡ್ರು
ಕೋಳುಮುಡಿಯನ ನಂಜು ಗಲುಡ್ರು

**ಕುಯ್ಯಂಗೇರಿ ನಾಡು**

ಕರಣೈಯ್ಯನ ಸೋಮೈಯ್ಯ ಗಲುಡ್ರು
ತೆಕ್ಕಡೆ ತಿಂಮಪ್ಪ ಗಲುಡ್ರು
ಸೋಮು ಗಲುಡನ ಪಾಂಡಿ ಗಲುಡ್ರು
ಬಲ್ಲಾಯಿರ, ಪಟ್ಟಡ ತಿಂಮಪ್ಪ ಗಲುಡ್ರು
ಮಂಚನ ಸೋಮೈಯ್ಯ ಗಲುಡ್ರು
ಕೊಡಪಾಲು ರಾಮಪ್ಪ ಗಲುಡ್ರು
ತೇನನ ಸುಬ್ರಾಯ ಗಲುಡ್ರು
ಅಣ್ಣೆಚ್ಚಿ ಮೇದು ಗಲುಡ್ರು

**ಕಾಂತು ಮೂರ್ನಾಡು**

ಕೊಡೆಕಲ್ಲು ದೇವಪ್ಪ ಗಲುಡ್ರು
ಕೊಂಪುಳಿ ಸುಬ್ಬಪ್ಪ ಗಲುಡ್ರು
ದೇರಜ್ಜೆ ಮಲ್ಲಪ್ಪ ಗಲುಡ್ರು
ಮಿತ್ತೂರು ಸುಬ್ಬಪ್ಪ ಗಲುಡ್ರು
ಪಾರೆಮಜ್ಜಿ ರಾಮಪ್ಪ ಗಲುಡ್ರು
ಪಾಣ್ತಾಲೆ ತಂಮಂಣ ಗಲುಡ್ರು
ಕುಯಿಂತ್ತೋಡಿ ಬಡ್ಕಣ ಗಲುಡ್ರು
ಬೈಯ್ಯಲಾಳಿ ಬಚ್ಚಂಣ ಗಲುಡ್ರು
ಆನೇರ ಕುಂಞಣ್ಣ ಗಲುಡ್ರು
ಅಪ್ಪೆಯ್ಯನ ದೇರಣ ಗಲುಡ್ರು

ಬೆಟ್ಟಯ್ಯ ಗಉಡನ ಯಂಕಪ್ಪ ಗಉಡ್ರು
ಕಲ್ಲುಮುಟ್ಲು ಸುಬ್ರಾಯ್ಯ ಗಉಡ್ರು
ಬೊಳ್ತಜಿ ಅಪ್ಪಯ್ಯ ಗಉಡ್ರು

**ಹುದಿಕೇರಿ ನಾಡು**

ಉಳುವಾರದ ಮುದ್ದಯ್ಯ ಗಉಡ್ರು
ಪಲ್ಲತ್ತಿ ಉತ್ತಯ್ಯ ಗಉಡ್ರು
ಪಳಯನ ಕಂಬು ಗಉಡ್ರು
ಲಿಂಗಡಿ ಚೊಲ್ಲ ಗಉಡ್ರು

**ಸಭೆಯ ಅಧ್ಯಕ್ಷರು**

ಶ್ರೀ ಚೆಪ್ಪುಡಿ ಸುಬ್ಬಯ್ಯನವರು

ಅಂತು ಸದ್ರಿ ಪ್ರಾಕಾರ ಕೂಡಿದ ಗಉಡುಗಳ ಜಾತಿ ಸಭೆಯಸ್ತಾರಾದ ನಾವು ಎಲ್ಲರು ಪೂರ್ವದಲ್ಲಿ ಈ ದೇಶದಲ್ಲಿ ನಮ್ಮ ಮಹಾರಾಜ ಸಾಹೇಬರ ಅಪ್ಪಣೆ ಪ್ರಾಕಾರ ನಮ್ಮ ಗಉಡುಗಳ ಜಾತಿ ಜನರಲ್ಲಿ ಸುಭ ಸೋಬಾನ ಮುಂತಾದ್ದಕ್ಕೆ ನಡೆಯತಕ್ಕ ಕಟ್ಟು ಕಟ್ಲೆ ಮಾಡಿದಲ್ಲಿ ಯಿವರಲ್ಲು ಕೆಲವು ಕಟ್ಟು ಕಟ್ಲೆಗಳು ನಡೆಸುವ ಬಗ್ಯೆ ಅನೇಕ ತೊಂದ್ರೆ ಉಂಟಗುವದರಿಂದ ಪೂರ್ವದ ಪದ್ಧತಿಯಲ್ಲಿ ಕೆಲವು ಬದಲಾಯಿಸಿ ಪ್ರತ್ಯೇಕವಾದೊಂದು ಮಹಜೂರು ಉಂಟು ಮಾಡಬೇಕಾದ್ದು ಜಾತಿ ಮಹಾಜನಾಂಗಗಳಿಗೆ ಅವಶ್ಯ ತೋರಿದ್ದು ಯಾವದೆಂದರೆ :

1. ಜಾತಿ ಮಾನಾಡು ವೀಳ್ಯ ಕೊಡಬೇಕೆಂದು ನಮೋದು ಮಾಡಿದ ಮೇರೆ ನಡಕೊಳ್ಳುವದಕ್ಕೆ ಮುಸ್ಕಿಲ್ ಕಂಡದರಿಂದ ವೀಳ್ಯಕ್ಕೆ ಬದಲಾಗಿ ಅರ್ಧ ರೂಪಾಯಿ ಕೊಡುತ್ತಾ ಬಹುದಿನದಿಂದ ನಡೆದು ಬಂದಿರುತ್ತೆ. ಸದ್ರಿ ಮೇರೆ ಬದಲಾಯಿಸಿರುವುದು ಉತ್ತಮವಾಗಿ ಕಾಣುವದರಿಂದ ಯಿದೇ ಮೇರೆ ಯಿಂನು ಮುಂದೆಯೂ ಜಾರಿಯಾಗಬೇಕು.

2 ಪೂರ್ವದಲ್ಲಿ ವೀಳ್ಯ ಕೊಟ್ಟು ಹೇಳುವ ಪದ್ಧತಿಯಿದ್ದುದಾದ್ರೆ ಮಹಾರಾಜ ಸಾಹೇಬರವರ ದಿವಸದಲ್ಲು ಮಾಡಿದ ಕಟ್ಟು ಕಟ್ಲೆ ಪಾಕ್ಕಿತ್ತೆಯಲ್ಲಿ ನಮೋದು ಮಾಡದೆ ಹೋಗುತ್ತಿರಲಿಲ್ಲ. ಅದರಲ್ಲು ನಮೋದು ಯಿಲ್ಲದೆ ಯಿರುವದು ನೋಡುವಾಗ ಈಚೆಗೆ ವೀಳ್ಯ ಕೊಟ್ಟು ಹೇಳುವದು ಹೊಸ ಪದ್ಧತಿ ಜಾರಿ ಬರಬೇಕೆಂಬದಾಗಿ ಕಾಣುತ್ತೆ. ಯಿದಕ್ಕೆ ಅನೇಕ ತೊಂದರೆ ಆಗುವುದಲ್ಲದೆ ನಂಮಂತೆ ಸರಿಯಾಗಿ ವೀಳ್ಯ ಪಡಕೊಳ್ಳುವದಕ್ಕೆ ಅಯೋಗ್ಯವಾದ ಕೈವಾಡದವರು ಅಧಿಕವಾಗಿ ಕೀಳು ಜಾತಿಯಸ್ತರು ತಮಗೆ ಕಟ್ಟೇ ವೀಳ್ಯ ಕೊಡಬೇಕೆಂದು ಕೈವಾಡದವರು ಕೆಲಸಕ್ಕೆ ಬಾರದೆ ಲಗ್ನಕ್ಕೆ ವಿಗ್ನ ಉಂಟು ಮಾಡುತ್ತಾರೆ. ಆದುದರಿಂದ ತಾವಾಗಿ ಹೇಳಿ ಕಳಿಸಿದವರ ಬಾಯಿ ಮಾತಿನಿಂದಲೇ ಮದುವೆಗೆ ಹೇಳಿಸಿ ಕೂಡಿದಂತ ಕುಲಸ್ತರು ಚಪ್ಪರ ಹಾಕಿದ ಸಂತಸದ ನಂತರ ಗಉಜಿಯಲ್ಲಿ ಮದುವೆ ಹೇಳುವ ವೀಳ್ಯವೆಂದು ಐದು ಕಟ್ಟು ಅಂದ್ರೆ 250 ವೀಳ್ಯದೆಲೆ, 50 ಉಂಡೆ ಅಡಿಕೆ ಸಹ ವೊಟ್ಟಾಗಿ ವೊಂದು ವೀಳ್ಯ ಕೊಡಬೇಕು. ಯಿದನ್ನು ಸಭೆಯಸ್ಥರಿಂದ ಕುಲಸ್ತರು ತೆಗೆದುಕೊಂಡು ಆಗುವಂತ ಮದುವೆ ಕಾರ್ಯವನ್ನು ನಿರ್ವಿಘ್ನದಿಂದ ನಡೆಸಬೇಕು.

3. ಗಂಡಿನ ಕಡೆಯಿಂದ ಹೆಂಣಿನ ಮನೆಗೆ ದಿಬ್ಬಣ ಹೋಗಿ ಕೊಡಿಯಾಳು ತಿಳುಹಿಸಿದ ಕೂಡ್ಲೆ, ಚಾಪೆ, ನೀರು, ಗಂಧದ ಕೊರಡು, ಸಾಣೆಕಲ್ಲು ಮದುಮಗನ ಸೇರುವ ಕಂಡಂತವರೀಗೂ ಯಿದರ ಜೋತ್ತೆಯಲ್ಲಿ ಸೇರಿ ಬಂದ ಯಲ್ಲಾ ಜನರಿಗೆ ಸಹ ಕಟ್ಟೇ ವೀಳ್ಯ ಕೊಡುವ ಪದ್ಧತಿ ಜಾರಿಯಾಗಿರುತ್ತೆ. ಯಿದರಿಂದ ಬಂದಂತಹ ದಿಬ್ಬಣದವರಿಗೆ ತಕ್ತನೆ ವೀಳ್ಯ ಗೊತ್ತು ತಿಳಿಯದೆ ಕೆಲವು ಜನರಿಗೆ ವೀಳ್ಯ ಕೊಡದೆ ಬಿಟ್ಟು ಹೋಗುವದು. ಕೀಳು ಜಾತಿಯಸ್ತರಿಗೆ ಕಟ್ಟೇ ವೀಳ್ಯ ಕೊಟ್ಟು ಹೋಗುವದು ಯಿಮೇರೆ ಅವಮಾನಕ್ಕೆಡೆಯಾಗುವರಲ್ಲ. ವೀಳ್ಯ ಸಿಕ್ಕದೆ ಹೋದವರು ತೆಗೆದು ಕೊಂಡ ಅಲ್ಪ ಜನರು ನನಗೆ ಕೈನಾಗೆ ವೀಳ್ಯ ಸಿಗಲಿಲ್ಲವೆಂದು ತಕರಾರು ಮಾಡುತ್ತಾ ಲಗ್ನದ ಹೊತ್ತು ಕಳೆದು ಬಿಡುತ್ತಾರೆ. ಆದುದರಿಂದ ಚಾಪೆ, ನೀರು ವಗ್ಯರೆ ಮರಿಯದಿಗಳನ್ನು ಸ್ವಾಹ ಜಾತಿಯಸ್ತರಲ್ಲದೆ ಪರಿ ಜಾತಿಯಸ್ತರೆ ತಂದು ಕೊಡಬೇಕು. ಯಿದನ್ನು ಗಂಡಿನ ಕಡೆಯವರು ತೆಗೆದುಕೊಂಡು ಚಾಪೆ ನೀರು ತಂದವರಿಗೆ ವೀಳ್ಯದೆಲೆ 10, ಅಡಿಕೆ 5ರ ಮೇರೆ ಸಾಣೆಕಲ್ಲು, ಗಂಧದ ಕೊರಡು ತಂದವರಿಗೂ ಸಹ ನೀಡಬೇಕು. ಯಿದು ಹೊರತು ಆ ಸ್ತಳದಲ್ಲಿ ಯಿರುವರಿಗೂ ವೀಳ್ಯದ ಮರಿಯಾದಿ ನಡೆಸಬೇಕೆಂಬ ಅವಶ್ಯ ಯಿರುಉದಿಲ್ಲ.

4. ನಮ್ಮ ಜಾತಿ ಕಟ್ಲೆ ಪ್ರಕಾರ ವೀಳ್ಯ ವಗ್ಯರೆ ಮೊದಲು ರಾಜ ಸಾಹೇಬರವರ ದಿವಸದಲ್ಲೂ ಉಂಟಾದ ಪದ್ಧತಿ ಪ್ರಾಕಾರ ಜಾರಿಯಿರಬೇಕು. ಬಂಣ, ಬಾಂಗಾರು ತೆಗೆದುಕೊಂಡು ಹೋಗುವಾಗ ಹೆಂಣು ಹಸೆ ತಪ್ಪಿಸಿ ಕುಂಡ್ರಿಸಬಾರದು. ಯರಡು ಜನ ಕುಂಡ್ರಿಸಬೇಕು.

5.ದಿಬ್ಬಣ ಹೋದಂತ ಗಂಡಿನ ಕಡೆ ಜನರು ಉಳಿಕೆ ಜನರು ಸಹ ಬಹಾಳ ಬೆಲೆಯೊಳ್ಳ ಬಟ್ಟೆ ಬರೆ, ನಗ ನಾಣ್ಯ ಮುಂತ್ತಾದ್ದನ್ನು ಉಟ್ಟು ತೊಟ್ಟು ಕೊಂಡಿರುತ್ತಾರೆ. ಯಿಂತವರ ಬಟ್ಟೆಗೂ, ಮೈಯಿಗೂ ಸಹ ಕೆಟ್ಟ ರಂಗುಗಳನ್ನು ಹಾಕಿಯೂ ದೊಣ್ಣೆ ಬಡಿಗೆ ಹಂಣು ಕಾಯಿಗಳಿಂದಲೂ ಹೊಡೆಡು ಅವಮಾನಕ್ಕು, ಲುಕ್ಷನಕ್ಕು ದೇಹ ಆಗುವ ಹಾಗೆ ಪೊರ್ಕಿ ಜನರು ನಡೆಸುವರು. ಪೂರ್ಣ ಮಾನಯಿರ ಬೇಕು. ಮಾನಯಿಲ್ಲದೆ ಯಾರಾದರು ನಡೆಸಿದರೂ ಯಿದಕ್ಕೆ ಕುಮ್ಮಕ್ಕೂ ಮಾಡಿದವರಿಗೂ ಕೂಡಿದ ಕುಲಸ್ತರು ತಕ್ಕ ತಪ್ಪು ವಿಧಿಸಿ ಬಂದೊ ಬಸ್ತು ಮಾಡಬೇಕು.

6.ಜಾತಿಗೆ ತಪ್ಪಿದಾದ್ರೆ ಪುಣ್ಯಾರ್ಚನೆ ವಿನಹಃ ಜಾತಿಗೆ ಬಾರೊಬಾರ ಮಾಡಿಕೊಳ್ಳಕೂಡದು. ಯಿಂತ ಕೆಲ್ಸನ ವಿಧಿಸಿದ್ವಾರೆ ಎಂಬ ಮಾತಿನ ವಿಶ್ವಾಸದಲ್ಲಿ ಪುರಸ್ಕಾರಯಿಟ್ಟು ಮನಶ್ಯರುಯೆಲ್ಲಾ ಕೂಟ ಉಪಚಾರದಲ್ಲಿ ಕರಿಸಲು ಬಹುದೆ ಹೊರತು ವೂರುನಾಡು ಪದ್ಧತಿ ಪ್ರಾಕಾರ ಆಗುವಂತ ಕೆಲ್ಸದಲ್ಲಿ ಸಭೆಗೆ ಬಂದು ಹಾಜರಾಗಲಿಲ್ಲ ಯಂತಾಗ್ಲಿ ಅವೂ ಮರಿಯಾದಿ ಮಾಡಿದ ನೆಂತಾಗ್ಲಿ ತಿರುಗಿ ಜವಾಬ್ ಕೊಟ್ಟ ನೆಂತಾಗ್ಲಿ ಯಿನ್ನು ಯಿಂತ ಕೆಲ್ಸವ್ರ ಚಿಲ್ರೆ ಸುಗ್ಗಿಯಲ್ಲಿ ವೊಬ್ಬ ಮನುಶ್ಯನ್ನಾಗ್ಲಿ ಸಕಲನ್ನಾಗ್ಲಿ ಬಯಸ್ಕಾರ ಯಿಟ್ಟಿದ್ದುದ್ರೆ ಯಿಂತವರ ಸದ್ರಿ ಪದ್ಧತಿ ಪ್ರಾಕಾರ ಕೂಡಿದ ಸಭೆಯಲ್ಲಿ ಮಾತ್ರ ಕೂಡಿಸಿಕೊಳ್ಳಬಾರದು. ಜಾತಿ ಪದ್ಧತಿ ಯ ಕೂಟ ಉಂಟು ಅಂತ ಸಭೆಗೆ ಸೇರಿಸಿಕೊಳ್ಳುವಲ್ಲು ಅಡ್ಡಿಯಿಲ್ಲ. ಯಿದರುತೆ ಜಾತಿಗಾಗಿ ಬಯಸ್ಕಾರ ಯಿಟ್ಟವನ ವೂರೂ ನಾಡು ಮಾತಿಗೆ ಕೂಡಿದ ಸಭೆಯಲ್ಲಿಯೂ :

**ಈರ್ಷ್ಯೆ, ಹೊಟ್ಟೆಕಿಚ್ಚು, ಭೇದ ಭಾವ, ಮತ್ಸರಗಳನ್ನು ಬಿಟ್ಟು ಒಂದಾಗಿ ದುಡಿಯೋಣಾ**

7.ಅನ್ಯಜಾತಿ ಮನೆಯಲ್ಲಿ ಸಂಕಕಷ್ಟ, ಸಭೆಯಲ್ಲಿಯೂ ಕಳೆಯ ಬಾರದು. ನಮ್ಮ ಕುಲದ ಪದ್ಧತಿ ಪ್ರಾಕಾರ ಆಗುವ ಮದುವೆ ಗ್ರಾಪ್ರವೇಸ ಆಗುವಾಗ್ಯೆ ನಮ್ಮ ಜಾತೀಯೊಂದಿಗೂ ನಡಿಯದ ಕೊಡಗರ ಮರಿಯಾದಿ ಪ್ರಾಕಾರ ದುಡಿಕೊಟ್ಟು ಪದ ಹೇಳಿಕೊಂಡು ಹೋಗಿ ಬಿರಿದು ಬ್ಬಾಳೆ ಕಡಿದು ಯಿಂತಾದನ್ನು ನಡೆಸಬೇಕೆಂದು ಕೆಲವರು ವಿಧಿಯುಕ್ತ ಪಡುತ್ತಾರೆ. ಇದು ಸರಿಯಾದುದ್ದಲ್ಲ. ಮಾನಯಿರಬೇಕು.

8.ಯಾರಾದ್ರು ನಮ್ಮ ಜಾತೀಂವ ಮೃತ ಪಟ್ರೆ ಆ ದಿನ ಕೊಟ್ಟ ವರ್ತ್ತಮಾನದ ಮೇರೆ ಜಮೆಯಾದ ಕುಲಸ್ತರು ಮಶೀದಿ ಮಾಡಿ ತಿರುಗುವಾಗ ಮೂರನೆಸುದ್ದಕ್ಕೆ ಕೂಡಿದ ಜನರು ಹನ್ನೊಂದನೆ ಕಟ್ಲೆಗೂ ಮೊಖರೂರು ಮಾಡಿದ ಮೇರೆ ಪೂರ್ವದಂತೆ ಯೆಲ್ಲಾ ಜನರು ಜಮೆ ಆಗಬೇಕು ಪ್ರತ್ಯೇಕ ಪ್ರತ್ಯೇಕ ಹೇಳುವುದು ಮನ್ನನೆ ಯಿರಬೇಕು. ಯಾರಾದರು ಹೇಳಲಿಲ್ಲ ಎಂದು ತಕರಾರು ಯಾರು ಹೇಳ ಕೂಡದು.

9.ಆಯ್ರಿ ಆ ಮೈಂಬೊಕ್ಲು, ಕುಡಿಯ, ಕುಂಬಾರ, ಹೆಗ್ಗಡೆ, ಈ ಜಾತಿ ಜನರಿಗೆ ಪಡುವನ ಬಾಗಿಲಲ್ಲಿ ಕರತಂದು ಆ ನೀಟನ ಅಡ್ಡ ಬಾಡೆಯಲ್ಲಿ ಅನ್ನ ನೀರು ಕೊಡಬಹುದು. ಮೂಡ ಬಡಗ ಯರಡು ಬಾಗಲಲ್ಲಿ ಕರಕೊಂಡು ಹೋಗಿ ಈ ದಿಕ್ಕುಗಳ ಬಾಡೆಯಲ್ಲಿ ಅನ್ನ ಕೊಡಬಾರದು.

10.ನಮ್ಮ ಗಲುಡುಗಳ ಜಾತಿಯಸ್ತನಾದ ಯಾವನೆ ಆಗಲಿ ವಚನ ಚಂಗುಲಿ ಆಳು ಯಂಬದಾಗಿ ಸರಕಾರದಲ್ಲಿ ಬರಸಿ ಕೊಳ್ಳಬಾರದು. ವೋಂದು ವೇಳ್ಯೆ ಬರಸಿ ಹೋಗಿದ್ದಾದ್ರಾ ವಂದು ವರ್ಷದ ವೋಳಗಾಗಿ ತಪ್ಪಿಸಿಕೊಳ್ಳುತ್ತೇನೆಂದು ಯಿಗ ಕಬುಲ್ ಪಟ್ರೆ ಆ ವಾಯಿದೆ ಪರಿಯಂತ್ರ ನೋಡಿಯಿದರ ವೋಳಗೆ ತಪ್ಪಿಸಿ ಕೊಳ್ಳದೆ ಯಿದ್ರು ತಪ್ಪಿಸಿಕೊಳ್ಳುವದಕ್ಕೆ ಯಿಗ ಕುಬುಲ್ ಪಡದೆ ಯಿದ್ರು ಅಂತ್ತ ಮನುಶ್ಯನ ಅತವ ಜಾತಿಗೆ ಬಯಸ್ಕಾರ ಯಿಡಬೇಕು.

11. ಅಂತು ಮೇಲೆ ವಿವರಿಸಿರುವ ಪ್ರಾಕಾರವೆ ನಂಮ ಗಲುಡುಗಳ ಜಾತ್ತಿಯೆಲ್ಲಾ ಜನರು ನಡಕೊಳ್ಳಬೇಕು. ನಡಕೊಳ್ಳದೆ ತಪ್ಪಿದಾದ್ರೆ ಆಯಾಯ ನಾಡಲ್ಲಿ ಯಿರುವ ಗಲುಡುಗಳ ಬುದ್ಧಿವಂತರು ತಕ್ಕ ತಪ್ಪು ವಿಧಿಸಬೇಕು. ಸದ್ರಿಯ ವರಕ್ಕಾಹಕ್ಕೆ ವೊಪ್ಪಿಕೊಳ್ಳದೆ ವಿನ್ಕಾರ ಮಾಡಿದಾದ್ರೆ ಜಾತಿಗೆ ಬಯಸ್ಕಾರಯಿಟ್ಟು ಯಿಟ್ಟು ಯಿ ಸಂಗ್ತಿ ತಪಶೀಲ್‌ನಲ್ಲಿ ಆಯಾಯ ನಾಡಿನ ಕುಲಸ್ತರಿಗೆ ಬರೆಶಿ ಕಳುಹಿಸಬೇಕು. ಯಿ ಪ್ರಾಕಾರ ನಡಕೊಳ್ಳುವುದು ಜಾತಿ ಪದ್ಧತಿಗೂ, ಮಾನಕ್ಕೂ ಕ್ಷೇಮಕ್ಕೂ ಅತಿಗುಣವೆಂದು ನಂಮೆಲ್ಲರ ಮನಶಿಗೆ ಕಾಣೂವದರಿಂದ ಯಿ ಪ್ರಾಕಾರ ನಡಿಯೂವ ಬಗ್ಯೆಯಿದರ ಕೆಳಗೆ ಬರಸಿದದು ಮಾಡಿದ್ದೇವೆ.

12. ಅಂತೂ ಕುಯ್ಯಂಗೇರಿ ನಾಡ್‌ನ ಪೈಕಿ ಅವಂದೂರು ಗ್ರಾಮ ವಂದಕ್ಕೆ ಸೋಮುಗಲುಡನ ಪಾಂಡಿ ಗಲುಡ್ರು ಸದ್ರಿ ಗ್ರಾಮದಲ್ಲು ನಮ್ಮ ಗಲುಡುಗಳ ಜಾತಿ ಪದ್ಧತಿ ಸುಭ ಸೋಬಾನ ಲೇಸು ಕಟ್ಲೆ ಮೂಂತ್ತಾದ್ದು ನಡೆಸತಕ್ಕ ಬಗ್ಯೆ ಯಿನಾಡು ವಂದನೇ ಗಲುಡ್ರಾದ ಕರಣೈಯ್ಯನ ಸೋಮೈಯ್ಯ ಗಲುಡ್ರಿಗೆ ನಂಮ ಜಾತಿ ಕುಲಸ್ತರು ಮೊಖರೂರು ಮಾಡಿ ಕೊಟ್ಟಿರುವ ಪಟ್ಟೆ ಪ್ರಾಕಾರ ನೋಡಿ ನುಕ್ಲು ಬರಶಿ ಸದ್ರಿ ಪಾಂಡಿ ಗಲುಡನ ಹೇಳಿಕೆ ಪ್ರಾಕಾರ ಆ ಗ್ರಾಮದ ಜಾತಿಯಸ್ತರು ಕೇಳಿ ನಡಕೊಳ್ಳಬೇಕು ಯೆಂಬುದಾಗಿ ಬರೆಶಿಕೊಟ್ಟ ಪತ್ರಿಕೆಯು ಯಿದಲ್ಲದೆ ಗಲುಡಾರ್ತಿ ಹಣ ಗಲುಡ ಮೊದ್ಲು ಬಾಕಿ ಗಲುಡರಿಗೆ ಸಲ್ಲುವಂತ ವೀಳ್ಯ ಮೂಂತ್ತಾದ್ದು ಐತಿಪ್ಪ ಆತನಿಗೆ ಸಲ್ಲಬೇಕು.

ಯಿದು ಹಿಂದಿನ ಕಾಲದಲ್ಲಿ ನಡೆದ ವಿಶಯವನ್ನು ನೋಡಿ ಬರೆದದಾಗಿರುತ್ತೆ. ಅವಂದೂರು ಗ್ರಾಮದಲ್ಲಿರುವ ಕುಳ ನಂಬ್ರು (5), ಪಟ್ಟಡ ಪೌತಿ ಕಾರ್‍ಯಪ್ಪನವರ ಮಗ ಮುತ್ತಂಣ, ಸಂಪಾಜೆ ಸರ್ಕಲ್, ಉತ್ತರ ಕೊಡಗು, ಅವಂದೂರು ಪೋಸ್ಟು.

**ಸಂಗ್ರಹ : ದಿ. ಪಟ್ಟಡ ಮುತ್ತಂಣ, ಅವಂದೂರು**

---

## ಚಿಗುರು ಮೀಸೆಯ ಹುಡುಗರೇ ಎದ್ದೇಳಿ

ದಿನ ನಿತ್ಯ ನಾವು ಬಸ್ಸುಗಳಲ್ಲಿ ರೈಲುಗಳಲ್ಲಿ ಪ್ರಯಾಣಿಸುವಾಗ ಮತ್ತು ಶಾಲಾ ಕಾಲೇಜುಗಳಲ್ಲಿ ಇಂಥ ಹುಡುಗರ ವರ್ತನೆಗಳನ್ನು ನಾವು ಕಾಣುತ್ತೇವೆ. ಅಂಗವಿಕಲರನ್ನು ಬಡವನನ್ನು ಹಿಯಾಳಿಸುವುದು. ಹಿರಿಯರನ್ನು ಅಪಹಾಸ್ಯ ಮಾಡುವುದು. ಬುದ್ಧಿ ಮಾತು ಹೇಳಿದವರಿಗೆ ತಿರುಗಿ ಹೇಳುವುದು. ಹುಡುಗಿಯರನ್ನು ಚುಡಾಯಿಸುವುದು. ಇದು ಇಂಥ ಹುಡುಗರ ದಿನಚರಿಯಾಗಿರುತ್ತದೆ. ಇನ್ನು ಮದ್ಯ ಪಾನ ಧೂಮಪಾನಗಳಂತ ಕೆಟ್ಟ ಚಟಗಳಿಗೆ ಬಲಿಯಾಗಿ ಸಂಪಾದಿಸಿದ ಹಣದೊಂದಿಗೆ ಹೆಚ್ಚು ಕಾಲ ಬಾರ್‌ಗಳಲ್ಲಿ ಕಳೆಯುತ್ತಾರೆ. ಇನ್ನೂ ಹೆಚ್ಚಾಗಿ ಕಂಡು ಬರುವ ಕಾಲೇಜುಗಳಲ್ಲಿನ ರ್‍ಯಾಗಿಂಗ್ ಸಮಸ್ಯೆ. ಇದರಿಂದ ಎಷ್ಟೋ ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸಕ್ಕೆ ವಿದಾಯ ಹೇಳಿದರೆ ಇನ್ನೂ ಕೆಲವರು ಆತ್ಮಹತ್ಯೆ ಮಾಡಿಕೊಳ್ಳುವರು. ಮತ್ತೊಂದು ಸಮಸ್ಯೆ ಎಂದರೆ ಹೆಚ್ಚಾಗಿ ಪ್ರೀತಿ ಪ್ರೇಮಾ ಎಂಬ ಬೆಂಕಿಗೆ ಬಿದ್ದು ಚಡಪಡಿಸುತ್ತಿರುವಾಗಲೇ ಮನೆಯವರಿಂದ ಏನಾದರೂ ವಿರೋಧವಿದ್ದರೆ ತಾವೆ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಇಂಥ ಹುಡುಗರು ಈ ವಿಷಯಗಳಲ್ಲಿ ಮಾತ್ರ ಪರಿಣತರು. ಜನಾಂಗದ ಏಳಿಗೆಗಾಗಿ ಭಾಷೆ ಸಂಸ್ಕೃತಿಯನ್ನ ಉಳಿಸುವ ಬೆಳೆಸುವ ಪ್ರಯತ್ನವನ್ನು ಕೈಬಿಟ್ಟಿರುತ್ತಾರೆ. ಶಾಲಾ ಕಾಲೇಜುಗಳಲ್ಲಿ ಸಹ ಹಲವು ಕಾರ್ಯ ಕ್ರಮಗಳನ್ನು ಹಾಕಿಕೊಂಡು ವಿವಿಧ ಸಾಧನೆಗಳನ್ನು ಮಾಡಿದ ಹಿರಿಯ ವ್ಯಕ್ತಿಗಳ ಬಗ್ಗೆ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ಧೀರ ಯೋಧರ ಬಗ್ಗೆ ಪ್ರಬಂಧಗಳ ಮೂಲಕ ಭಾಷಣಗಳ ಮೂಲಕ ಮನದಟ್ಟು ಮಾಡಿದರೂ ಪ್ರಯೋಜನವಿಲ್ಲದಾಗಿದೆ. ನಮ್ಮ ಜನಾಂಗದ ಹಿರಿಯ ವ್ಯಕ್ತಿಗಳಾದ ಅಪ್ಪಯ್ಯ ಗೌಡರು, ಸಣ್ಣಯ್ಯ ಪಟೇಲ್‌ರು ಇಂತಹ ಗಣ್ಯ ವ್ಯಕ್ತಿಗಳ ವೀರಗಾಥೆಯನ್ನು ಓದಿ ತಿಳಿದು ಕೊಳ್ಳುವ ಆಸಕ್ತಿಯಾರಿಗೂ ಇಲ್ಲವಾಗಿದೆ. ನಮ್ಮ ಭಾಷೆ ಸಂಪ್ರಾದಾಯದ ಉಡುಪು ಎಂದರೆ ಮೂಗು ಮುರಿಯುವರೆ ಹೆಚ್ಚು. ಹಾಗಾದರೆ ಈ ಚಿಗುರು ಮೀಸೆಯ ಬಿಸಿರಕ್ತದ ನಮ್ಮ ಯುವಕರು ಹೀಗೇಕೆ ಮಾಡುತ್ತಾರೆ?

"ಏಳಿ ಯುವಕರೆ ಎದ್ದೇಳಿ ಜನಾಂಗದ ಏಳಿಗೆಗಾಗಿ ಹೋರಾಡಿ"

ಅಣ್ಣಚೀರಾ ಭಾರತಿ, ಮಕ್ಕಂದೂರು ಗ್ರಾಮ.

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

(ಹಿಂದಿನ ಸಂಚಿಕೆಯಿಂದ) ಧಾರಾವಾಹಿ - 4

ಬೆಳಕ್ ಹರ್ದ್ 9ಗಂಟೆ ಆಗಿತ್. ಡೇ ಡ್ಯೂಟಿಗೆ ಪೋಲಿಸ್‌ಗ. ಇನ್‌ಸ್ಪೆಕ್ಟರ್‌ಗ ಬೇರೆ ಜನ ಸ್ಟೇಶನ್‌ಗೆ ಬಂದೋ. ಇನ್‌ಸ್ಪೆಕ್ಟರ್ ಸೋಮಣ್ಣಾತ್ತೇಳವು ಅಲ್ಲಿ ಸ್ವಲ್ಪ ಹಳಬರು. ಅವುಕೆ ಕಳ್ಳರ, ಕೇಡಿಗಳ, ದರೋಡೆ ಕೋರರ್ ಇವರೆಲ್ಲಾ ಸ್ವಲ್ಪ ಪರಿಚಯ ಉಟ್ಟು, ಹಂಗಾಗಿ ಅಲ್ಲಿದ್ದ ಹಳೇ ದರೋಡೆಕೋರರ ಫೈಲ್‌ಗಳ ತರ್ಸಿ ನೋಡಿಕೆ ಶುರು ಮಾಡ್ದೊ. ಹಂಗೇ ಇಲ್ಲಿ ಒಳಗೆ ಕುದ್ದಿದ ಒಬ್ಬೊಬ್ಬ ಕೈದಿಗಳನ ಹೊರಗೆ ಕರ್ದ್ FIR ಬರಿಯಕ್ಕೊಸ್ಕರ ವಿಚಾರಣೆ ಮಾಡಿಕೆ ಶುರು ಮಾಡ್ದೊ. ಅದರಲ್ಲಿ ಆ ಮೂರು ಜನ ದರೋಡೆಕೋರರ ಹಳೇ ಪ್ರಕರಣಗ ಬೇಕಾದಷ್ಟ್ ಇತ್ ಹಂಗಾಗಿ ಅವರವರ ಫೈಲ್‌ಲಿ ಅವರ ಹಿಂದಿನ ಪ್ರಕರಣ ಒಟ್ಟಿಗೆ ಈಗಿನ ಪ್ರಕರಣದ ವಿಚಾರಣೆನೂ ಬರಿಯಕೆ ಪೋಲಿಸ್ ರೈಟರ್‌ಗೆ ಹೇಳ್ತ್. ಕೊನೆಗೆ ಈಗ್ಯಾಂಗ್ ಲೀಡರ್ ರಾಜುನ ಎಳ್ಕಂಡ್ ಬಾಕೆ ಹೇಳ್ತ್. ಇಬ್ಬರು ಪಿ. ಸಿ.ಗ ಒಳಗೆ ಹೋಗಿ ಅಡ್ಡ ಬಿದ್ ಹೋಗಿದ್ದ ರಾಜುನ ರಟ್ಟೆಮೇಲೆ ಹಿಡ್ದ್ ಎತ್ತಿ ಎಳ್ಕಂಡ್ ಬಂದ್ ನಿಲ್ಸಿದೊ. ನಮ್ಮ ಸೋಮಣ್ಣ ಇನ್‌ಸ್ಪೆಕ್ಟರ್ ಈ ರಾಜು ಹೈದನ ನೋಡ್ದಂಗೆ ಇಂವ ನಮ್ಮ ಊರು ಹೈದನಂಗೆ ಕಂಡೆದಲ್ಲಾತ ಮನ್ಸ್‌ಲಿ ಗ್ಯಾನ ಮಾಡಿಕಂಡೊ. ಆದ್ರೂ ದರ್ಪಲೇ ಹೇಯ್!! ಏನೋ ನಿನ್ನ ಹೆಸ್ರು? ಹೇಯ್ ತಲೆ ಎತ್ತಿ ಬಾಯ್ ಬುಡೋ, ಸೂಳೆ ಮಗನೆತ್ತೇಳಿಕಂಡ್ ಕೈಲಿದ್ದ ದೊಣ್ಣೆಂದ ಅಂವನ ಗಡ್ಡದ ಕೆಳಗೆ ಚುಚ್ಚಿ ಮುಖನ ಮೆಲಕ್ಕೆ ಎತ್ತಿಕೆ ಪ್ರಯತ್ನ ಮಾಡ್ದೊ. ರಾಜುನ ಎತ್ತಿದ ಕತ್ ದ್ ತಲೆ ಪುನಃ ಬಲ ಇಲ್ಲ ದಂಗೆ ಕೆಳಗೆ ಬೀತ್. ಆಗ ಒಬ್ಬ ಪಿ. ಸಿ. ಇಂವನ ತಲೆ ಕೂದ್ಲು ಹಿಡ್ತ್ ಮುಖನ ಮೇಲೆ ಮಾಡ್ತ್, ಆಗ ನೋಡಿಕೆ ಇಂವನ ಮುಖ ಜ್ವರ ಬಂದೇ ಕೆಂಪು ಕೆಂಡದಂಗೆ ಆಗುಟ್ಟು, ಮೈ ಬಿಸಿ ಏರಿ ಜ್ವರ ಬಂದ್ ತುಟಿಗ ಅದುರುತಿದ್ದೊ, ಕಣ್ಣ್ ಮುಚ್ಚಿ ಹೋಗುಟ್ಟು, ಶರೀರ ಬಿಸಿಏರಿ 104 ಡಿಗ್ರಿತ'ರ ಮೈ ಕಾದುಟ್ಟು, ಇವನ ತಲೆಲಿ ಸೊಯೆನೇ ಇಲ್ಲೆ, ಹಾಂ! ಹೂಂ!! ತಾ ಹೇಳಿಕ್ಕೂ ಇಂವಂಗೆ ಆತ್ಲೆ. ಬೆಳಿಗ್ಗಿನ ಜಾವ ಇಂವಂಗೆ ಮಾಡ್ದ ಚಾರ್ಜ್ ಆಗಿ ಇಂವನ ಶರೀರ ನಡುಗುತ್ತಾ ಉಟ್ಟು. ಇಂವನ ಕೈ ಬುಟ್ಟರೆ ಕಾಲ್‌ಲಿ ಸ್ವಾಧೀನ ಇಲ್ದೆ ಕೆಳಕೆ ಬೀಳುವಂಗೆ ಉಟ್ಟು. ಇದನೆಲ್ಲಾ ನೋಡ್ದ ಇನ್‌ಸ್ಪೆಕ್ಟರ್ ಸೋಮಣ್ಣ ಇಂವಂಗೆ ಇದ್ ಹೊಸ ಕಸಬ್ ಕಂಡದೆ. ಇನ್ನೂ ನಮ್ಮ ಏಟ್ ತಿಂದ್ ಅನುಭವ ಇಲ್ಲೆ. ಇಂವನ ಇಲ್ಲೇ ಸ್ವಲ್ಪ ಹೊತ್ ಇಟ್ಟ್ ಕಂಡರೆ ಸ್ಟೇಶನ್ ಒಳಗೇ ಸತ್ತು ಹೋದು, ಈಗ ಇಂವಂಗೆ ಅರ್ಜೆಂಟಾಗಿ ಗ್ಲುಕೋಸ್ ಹಾಕ್‌ಸಕೂತ್ತೇಳಿ ತಿರ್ಮಾನ ಮಾಡ್ದೊ.

ಅದೇನೊ ಒಂದ್ ಮನ್ಸ್ ಬಂದ್ ಇಂವನ ಮೇಲೆ ದಯೆ ತೋರಿಸಿದೊ. ಏಯ್ ರಂಗಪ್ಪ ಮತ್ತೆ ನಿಂಗಪ್ಪ ಬನ್ರೋ ಇಲ್ಲಿ ಇಂವನ ಅರ್ಜೆಂಟಾಗಿ ನಮ್ಮ ಕೈದಿ ವಾರ್ಡ್‌ಲಿ ಎಡ್‌ಮಿಟ್ ಮಾಡಿ ಔಷದಿ ಕೊಡ್ಸಿ ಅಲ್ಲೇ ನೋಡ್ಕೊಳ್ಳಿ ಹುಷಾರಾಗಿ ನಡ್ಸಿ ಕೊಂಡು ಹೋಗಿ ಅಲ್ಲಿ ಇಂವನನ್ನು ಕಾಯ್ದು ಕೊಂಡಿರುವುದು ನಿಮ್ಮಿಬ್ಬರ ಡ್ಯೂಟಿ ಬೀ ಕೇರ್‌ಫುಲ್. ತಿಳಿತಾ ನಾನ್ ಆ ಮೇಲೆ ಬಂದ್ ವಿಚಾರಿಸಿ ಕಂಡನೆತ್ತೇಳ್ತ್.

ಮಿಸ್ಟರ್ ರಾಜುಗೆ ಮೈಯೆಲ್ಲಾ ಬೆವರು ಹರ್ದ್ ಜ್ವರ ಬುಟ್ಟು ಕಣ್ ಬುಟ್ಟ್ ನೋಡ್ದೇ ಸಾಯಂಕಾಲದ ಗಂಟೆ 7 ಆಗುಟ್ಟು. ಎದುರುಗಡೆ ಇಬ್ಬರು ಪೋಲೀಸ್‌ಗ ಕುದ್‌ಕಂಡ್ ಬೀಡಿ ಸೇದುತ್ತಾ ಒಳ್ಳೊ, ತನ್ನ ಕಟ್ಲ್‌ನ ಎಡ್ದ ಬದೀಲಿ ನೋಡ್ರೇ ಅಲ್ಲಿ ಒಬ್ಬ ಹುಚ್ಚನ ತರದ ಪೇಶಂಟ್ ತಲೆಕೆರ್ಕಂಡ್ ಮಲಗಿಟ್ಟು. ಇದ್. ಕೆ. ಆರ್. ಆಸ್ಪತ್ರೆಲಿ ಪೋಲಿಸ್ ಕಸ್ಟಡಿಲಿ ಇರುವಂತಹ ಕೈದಿಗಳ ವಾರ್ಡ್. ಸುತ್ತಾ ಗಬ್ಬು ವಾಸನೆ ಮೂಗಿಗೆ ಹೊಡೀತಾ ಉಟ್ಟು. ಇಂವನ ಅದರೊಳಗೆ ಮಲ್ಗಿಸಿ ಕೈಗೆ ಗ್ಲುಕೋಸ್ ಡ್ರಿಪ್‌ನ ಹಾಕಿ ಮಡಗ್ಯೊಳೊ, ಇಂವ ಒಮ್ಮೆ ಲಾಯಕ್‌ಲಿ ಕಣ್‌ಬುಟ್ಟ್ ನೋಡಿ ಒಂದ್ ನಿಮಿಷ ಗ್ಯಾನ ಮಾಡ್ತ್. ಇಂವಂಗೆ ಅಲ್ಲಿ ಸ್ಟೇಶನ್‌ಲಿ ಬೆಳಗ್ಗಿನ ಜಾವ ಬೆನ್ ತುಂಬಾ ಪೆಟ್ಟ್ ಬಿದ್ದದ್ ಮಾತ್ರ ಗೊತ್ತು. ಈಗ ನೋಡ್ರೆ ಆಸ್ಪತ್ರೆ ವಾರ್ಡ್ ಒಳಗೆ ಒಳೆ. ನಂಗೆ ಏನ್ ಆಗಿ ಹೋಗುಟ್ಟು ಹೋ ನನ್ನ ಗುರುವೇತ್ತೇಳಿ ತಲೆಮೇಲೆ ಕೈ ಹೊತ್‌ಕಂಡ್ ನೀನೇ ಈಗ ನಂಗೆ ಗತಿ ಈ ಗುಮ್ಮನಂತಹ ಪೋಲಿಸ್‌ನವರ ಕೈಯಿಂದ ಹೆಂಗಾದ್ರೂ ಮಾಡಿ ಪಾರ್ ಮಾಡುಕುತಾ ನೆನಸಿಕಂಡ್ ಎದುರಿಗೆ ಕುದ್ದಿದ್ದ ಪೋಲಿಸರನ್ನ ಕೇಳ್ತ್ ಏನ್ ಸ್ವಾಮಿ ಯಾಕೆ ನನ್ನ ಇಲ್ಲಿಗೆ ತಂದ್ ಮಲಗಿಸಿದ್ರೀ? ಆಗ ಆ ಇಬ್ರೂ ಪೋಲಿಸ್‌ಗ ಹತ್ರಕೆ ಓಡಿ ಬಂದೊ, ಹೋ ಏನಪ್ಪಾ ಈವಾಗ ನಿಂಗೆ ಪ್ರಜ್ಞೆ ಬಂತಾ? ಸಧ್ಯ ಎಲ್ಲಿ ನೀನ್ ನಮ್ಮ ಸ್ಟೇಶ್ನನ್‌ನ ಒಳಗಡೇ ಗೊಟಕ್‌ತ ಅಂದು ಬುಡ್ತಿಯಾಂತ ನಮ್ಮ ಇನ್‌ಸ್ಪೆಕ್ಟರ್ ಸಾಹೇಬ್ರಿಗೆ ಹೆದ್ರಿಕೆ ಆಗಿ ಹೋಗಿತ್. ಅದ್‌ಕೆ ನಾವು ನಿನ್ನ ಇಲ್ಲಿಗೆ ಎತ್ತ್‌ಕೊಂಡ್ ಬಂದ್ ಹಾಕಿ ಗ್ಲುಕೋಸ್ ಕೊಡ್ಸಿದ್ದೀವಿ, ನಿಂಗೆ ವಿಪರೀತ ಜ್ವರ ಬಂದು ನಿಂಗೆ ಪ್ರಜ್ಞೆನೇ ಇರ್ಲಿಲ್ಲ ಈಗ ಜ್ವರ ಇಳದಯ್ತನಯ್ಯಾ? ಅಂತ ಕೇಳ್ದೊ. ಹಾಂ. ಹೌದು ಸ್ವಾಮಿ ಜ್ವರ ಬಿಟ್ಟಿರಬೇಕು. ಮೈಯೆಲ್ಲಾ ಸ್ನಾನ ಮಾಡ್ದಂಗೆ ಬೆವರು ಸುರ್ದುಟು. ನಂಗೆ ಒಂದೇ ಗ್ಲಾಸ್ ನೀರ್ ಬೇಕಲ್ಲಾ ದಯವಿಟ್ಟು ತಂದ್‌ಕೊಡಿತಾ ಗಂಟಲ್‌ನ ಸರಿಮಾಡಿಕಂಡ್ ಕೇಳ್ತ್, ಆಗ ಒಬ್ಬ ಬಾತ್ ರೂಂಗೆ ಹೋಗಿ ಒಂದ್ ಗಾಜಿನ ಬಾಟ್ಲಲಿ ನೀರ್‌ನ ತಕಂಡ್ ಬಂದ್ ಕೊಡ್ತ್. ರಾಜು ಮೆಲ್ಲಂಗೆ ಎದ್ ಕುದ್ ಆ ನೀರ್‌ನೆಲ್ಲಾ ಕುಡ್ದ್ ಬಾಟ್ಲನ ಖಾಲಿ ಮಾಡ್ತ್. ಈ ತಣ್ಣನೆ ನೀರ್ ಹೊಟ್ಟೆ ಒಳಗೆ ಹೋದಂಗೆ ಮೈಲೆಲ್ಲಾ ಸುಸ್ತ್ ಕಮ್ಮಿ ಆಗಿ ಸ್ವಲ್ಪ ಚೈತನ ಬಾತ್. ಹಂಗೇ ಕಣ್ ಬುಟ್ಟ್ ತನ್ನ ಮೈ ಕೈನೆಲ್ಲಾ ಪೂಜಿಕಂಡ್ ಒಂದ್ ಸರ್ತಿ ನೋಡಿಕಂಡತ್, ಆಮೇಲೆ ಆ ಪೋಲಿಸ್‌ನೊಟ್ಟಿಗೆ ಒಂದ್ ಸಿಗರೇಟ್ ಇದ್ರೆ ಕೊಡಿ ಸ್ವಾಮಿತ್ತಾ ಕೇಳ್ತ್. ಇಲ್ಲಾ ಇವ್ರೇ.. ಸಿಗರೇಟ್‌ನ ನಾವ್ ಸೇದುದಿಲ್ಲೆ ತಕಣಿ ಈಗ ಬೇಕಾದ್ರೆ ಒಂದ್ ಬೀಡಿನ ಸೇದಿತ್ತೇಳಿ ಅವು ಒಂದ್ ಬೀಡಿನ ಸೇದಿಕೆ ಕೊಟ್ಟೊ.

ಅವು ಕೊಟ್ಟ ಬೀಡಿನ ಸೇದುತಾ ಹೇಳ್ತ್. ಸಾರ್ ನಂಗೆ ಈಗ ಹೊಟ್ಟೆ ತುಂಬಾ ಹಸೀತಾ ಉಟ್ಟು ನೀವು ಹೊರಗಡೆಗೆ

ಏನಾದ್ರೂ ಹೋದು ಇದ್ರೆ ಹಂಗೆ ವಾಪಾಸ್ಸ್ ಬಾಕಾಕನ ನಂಗೆ ಒಂದ್ ಪ್ಲೇಟ್ ಊಟನ ಪಾರ್ಸೆಲ್ ಕಟ್ಟಿಸಿಕಂಡ್ ಬನ್ನಿ ಹಂಗೇ ಒಂದ್ ಪ್ಯಾಕ್ ಐ.ಟಿ.ಸಿ ಸಿಗರೇಟ್ ಮತ್ತೆ ಮಿಕ್ಕಿದ ಚಿಲ್ರೆ ಹಣನ ನೀವೇ ಇಟ್ಟ್ಕಣಿತ್ತೇಳಿ ನೂರರ ಒಂದ್ ನೋಟ್‌ನ ಪಿ.ಸಿ. ರಂಗಪನ ಕೈಗೆ ಕೊಡ್ತ್. ಈ ಕಾಸ್‌ನ ನೋಡ್ತ ರಂಗಪ್ಪಂಗೆ ಒಂದ್ ಕ್ವಾಟರ್ ಬಾಟ್ಲ್ ಮೇಲೆ ಆಸೆ ಆತ್. ಹೊ. ಹೋ. ಆಯ್ತು ಬಿಡೊ ಹೇಯ್ ಲಿಂಗಪ್ಪ ನೀನ್ ಹೋಗಿ ಇಂವಂಗೆ ಬೇಗ ಒಂದ್ ಊಟನ ಕಟ್ಸಿಕಂಡ್ ಬಂದ್ ಬುಡ್ ಪಾಪ ಈ ಹೈದಂಗೆ ತುಂಬಾ ಹೊಟ್ಟೆ ಹಸ್ತಿರಕ್ಕು ಹಾಂ ಹಂಗೇ ಬಾಕಾಕನ ನಮಿಗೆ ಒಂದ್ ಕ್ವಾಟರ್ ಬಾಟ್ಲ್, 200 gr. ಮಿಕ್ಷರ್, ಎರಡ್ ಕಟ್ಟ್ ಬೀಡಿ ಮರಿಬ್ಯಾಡ. ನಾನ್ ಇಂವನ ಇಲ್ಲಿ ನೋಡಿಕಂಡ್ ಇದ್ದನೆತ್ತೇಳ್ತ್. ಲಿಂಗಪ್ಪ ಆ ದುಡ್ಡನ ಇಸಿಕಂಡ್ ಹೊರಟಿತ್ ಆಗ ರಾಜು ಸಾರ್ ಇಲ್ಲಿ ರೀಸಸ್ ಮಾಡಿಕೆ ಜಾಗ ಉಟ್ಟ್ಯಾತ ಕೇಳ್ತ್ ಹಾಂ. ಬಾ ಇಲ್ಲಿ ತ್ತೇಳಿ ಬಾತ್ ರೂಂ, ಕಕ್ಕಸ ಎಲ್ಲಾ ಒಂದರೊಳಗೆ ಇದ್ದ ರೂಂನ ತೋರ್ಸಿತ್, ಛೆ, ಏನ್ ಸಾರ್ ನಾನ್ ರೀಸಸ್ ಮಾಡಕ್‌ನ ಕೂಡ ನೀವು ನನ್ನ ಹಿಂದೆ ಇರೂಕಾ? ನಾನ್ ನಿಜವಾಗಿಯೂ ಕಳ್ಳ ಅಲ್ಲ ನಿಮ್ಮ ಆಣೆಯಾಗ್ಲೂ ನಾನ್ ದರೋಡೆ ಕೋರ ಅಲ್ಲ ನಾನೇ ಆ ದರೋಡೆಕೋರರ ಹಿಡ್ಡ್‌ಕೊಟ್ಟಂವ. ಆದ್ರೇ ನಿಮ್ಮ ಪೋಲಿಸ್‌ನವ್ರು ನನ್ನ ನಂಬಿತಿಲ್ಲೆ. ಅಷ್ಟೆ ಇದ್ ನನ್ನ ಕರ್ಮ. ಆಗಲಿ ದೇವರಿದ್ರೆ ನಿಜಸಂಗತಿ ಆಮ್ಯಾಲಾದ್ರೂ ಗೊತ್ತಾದಲ್ಲಾ? ತ್ತಾ ಕೇಳ್ತ್. ಇಂವನ ಮಾತ್‌ಲಿ ನಿಜ ಸಂಗತಿ ಇರ್ದುತಾ ರಂಗಪ್ಪಂಗೆ ಅನಿಸಿದ್ರೂ ಅಂವನ ಮುಂದೆ ತೋರ್ಸಿಕಣ್‌ದೆ ಹೇಯ್ ಬಾರಯ್ಯ ಬೇಗ ರೀಸಸ್ ಮಾಡಿಕಂಡ್, ನಿನ್ನ ಕಥೆನೆಲ್ಲಾ ನಾನ್ ಆಮ್ಯಾಲೆ ಕೇಳಿನೆ ತಾ ದರ್ಪಲೇ ಹೇಳ್ತ್, ಅಷ್ಟೊತ್ತಿಗೆ ಡಾಕ್ಟರ್ ನರ್ಸ್‌ಗಳ ಗುಂಪು ವಾರ್ಡ್‌ನ ಒಳಗೆ ಬಂದೊ. ರಾಜುನ ಬೆಡ್ ಮೇಲೆ ಮಲಗಿಸಿ ಅಂವನ ಶರೀರನ ಎಲ್ಲಾ ಚೆಕಪ್ ಮಾಡಿ ನೋಡ್ದೊ. ಒಂದ್ ಇಂಜೆಕ್ಷನ್ ಕೊಡಿಕೆ ನರ್ಸ್ ಗೂಡೆಗೆ ಹೇಳ್ದೊ, ಒಟ್ಟಿಗೆ Sleeping ಮಾತ್ರೆ ಮತ್ತೆ Painkiller ಮಾತ್ರೆನ ಕೊಟ್ಟೊ ಮತ್ತೆ ಪಕ್ಕದ ಬೆಡ್‌ಲಿದ್ದ ಸೆಮಿಕ್ರೇಕ್ ಪೇಷಂಟ್‌ಗೆ ನಿದ್ರೆ ಮಾತ್ರೆನ ಮಾತ್ರ ನುಂಗಿಕೆ ಕೊಟ್ ಹೋದೊ. ಇವು ಹೊರಗಡೆಗೆ ಹೊರಟ್ ಆಕನ ಇನ್‌ಸ್ಪೆಕ್ಟರ್ ಸೋಮಣ್ಣನವು ವಾರ್ಡ್ ಒಳಗೆ ಬಂದೊ ಏನಯ್ಯಾ ರಾಜು ಜೀವಸಹಿತ ಬದುಕಿದ್ದಿಯ್ಯಾ? ಹಾಂ ಚೆನ್ನಾಗಿ ಚೇತರಿಸಿ ಕೊಂಡು ಬಾ ಪುನಃ ನಮ್ಮ ಸ್ಟೇಶನ್ನಿಗೆ ಪುನಃ ನಿನ್ನ ಬೆನ್ನ್ ಮೂಳೆನ ಮುರಿಯಕು, ಅದ್ ಸರಿ ರಂಗಪ್ಪಾ? ಡಾಕ್ಟರು ನೋಡ್ದರಲ್ಲಾ ಏನು ಹೇಳ್ದರು ತಾ ಕೇಳ್ತ್. ಇನ್ನೂ ಎರಡ್ ದಿನ ಇಲ್ಲೇ ಬೆಡ್ ಮೇಲೆ ಇಂವಂಗೆ ಟ್ರೀಟ್‌ಮೆಂಟ್ ಆಗಕುತಾ ಹೇಳಿ ಹೋದೊ ಸಾರ್‌ತಾ ರಂಗಪ್ಪ ಹೇಳ್ತ್ , ಆಯ್ತು be carefull ಜೋಪಾನ ಆಗಿ ನೋಡ್ಕೋಬೇಕು, ನೀವಿಬ್ರೂ ನಿಮ್ಮ ಡ್ಯೂಟಿನ ಕಂಟಿನ್ಯೂ ಮಾಡಿ ನಾಳೆಂದ ಬೇರೆ P.C.ನ ಹಾಕಿಕೊಟ್ಟನೆತ್ತೇಳ್ದೊ.

(ಮುಂದ್‌ವರ್ದದೆ)

ಶಂಕರನ ಮುತ್ತಪ್ಪ ಬಸಪ್ಪ

"ಪತ್ರಿಕೆ ಬೆಳೆಯಲು ಓದುಗರ ಸಹಕಾರ ಅಗತ್ಯ"

## ನನ್ನ ಪ್ರೀತಿಯ ಕೊಡಗು ಸಂಗಾತಿ

ಓ ನನ್ನ ಕೊಡಗು ಸಂಗಾತಿ
ನಿನಗೆ ನನ್ನ ನಮನಗಳು
ವಸಂತ ಋತುವಿನ ಕೋಗಿಲೆಯು
ಕುಹೂ ಕುಹೂ ಕೂಗಿದಂತೆ ನನ್ನ
ಮನ ಕೂಗುವುದು ನಿನ್ನ ಕೀರ್ತಿಯನ್ನು
ಮೇಘರಾಜನ ಕಂಡು ನರ್ತಿಸುವ ನವಿಲಿನಂತೆ
ನಿನ್ನ ಉನ್ನತಿ ಕಂಡು ನರ್ತಿಸುವುದು
ನನ್ನ ಹೃದಯವಮ್ಮ.

ಹುಣ್ಣಿಮೆಯ ಚಂದ್ರಮನ ಕಂಡು
ಕಡಲುಕ್ಕುವ ತೆರದಿ ನನ್ನ ಹರುಷ
ಉಕ್ಕಿ ಹರಿಯುವುದು ನೀನು ಬಳಿಗೆ ಬಂದಾಗ
ಓ ನನ್ನ ಸಂಗಾತಿ, ನಿನ್ನ ಕೀರ್ತಿಯ
ಪತಾಕೆ ಸದಾ ಹಾರುತ್ತಿರಲೆಂಬುದೇ ನನ್ನ ಹಾರೈಕೆ

ತುಂತಜೆ ದಿವ್ಯ ಉಲ್ಲಾಸ್
ಮೈಸೂರು

## ಪರಮಾಣು

ಅಬ್ಬಾ, ಪರಮಾಣು......

ನೀನಿರುವುದು ಒಂದು ಕಣ!
ನಶಿಸುವೆ ಜಗವನ್ನೆ ಒಂದು ಕ್ಷಣ.
ನಿನ್ನನ್ನು ಸೃಷ್ಟಿಸಿದನು ವಿಜ್ಞಾನಿ,
ಹೇಳಲೇ.. ಅವನಿಗೆ ನಾ ಅಜ್ಞಾನಿ?
ನಿನ್ನ ಸ್ಫೋಟ ಹಿರೋಶಿಮ-ನಾಗಸಾಕಿಯಲಿ
ಮಡಿದರು ಮುಗುದರು ಸಹಸ್ರ ಸಂಖ್ಯೆಯಲಿ,
ನಿನ್ನಿಂದಾಗುವ ದುರಂತ...
ಆದ ಹಾನಿ ಅನಂತ!
ನಡೆಯಿತು ನಿನ್ನ ಪರೀಕ್ಷೆ ಪೊಖ್ರಾನ್‌ನಲ್ಲಿ,
ತೋರಿಸಿತು ದೇಶ ಸಾಮರ್ಥ್ಯವನ್ನಲ್ಲಿ.
ಹೇರಿತು ವಿದೇಶಗಳು ದಿಗ್ಬಂದನ...
ನಡೆಯಿತು ನಮ್ಮೆಲ್ಲಲವು ಅವಲೋಕನ.
ಅಬ್ಬಾ ಪರಮಾಣು.. ಆನಿನ್ನ ಶಕ್ತಿ!
ಇದೆಯೇನು.. ನಿನ್ನಿಂದಲೇ ಮುಕ್ತಿ?

ಮೂಡಗದ್ದೆ ಕೃಪಾ ಈರಪ್ಪ,
ತಿತಮತಿ

ತಾನು ಮಾಡಲಾರ, ಇನ್ನೊಬ್ಬರನ್ನು ಮಾಡಲು ಬಿಡಲಾರ - ಈ ಬುದ್ಧಿಯನ್ನು ಬಿಡಿ

# ಗೌಡರ ಮದುವೆಯ ಒಂದು ವಿಶ್ಲೇಷಣೆ - ಟೀಕೆ

ಲೇಖಕರು ಪ್ರೊ. ಪೂಜಾರಿ ಮೊಣ್ಣಪ್ಪ ಜನವರಿ 1 ರಿಂದ 15 ರವರೆಗೆ ಪ್ರಕಟವಾದ ಪಾಕ್ಷಿಕ ಪತ್ರಿಕೆಯಲ್ಲಿ ಪ್ರಕಟವಾದ ಪುಟ 17 ರಿಂದ 19ರವರೆಗೆ ಪ್ರಕಟವಾದ 19ನೇ ಪುಟದ ಲೇಖನವನ್ನು ಓದಿ ತುಂಬಾ ಬೇಸರವಾಯಿತು. ಈ ಲೇಖನವನ್ನು ಡಾ. ಪುರುಷೋತ್ತಮ ಬಿಳಿಮಲೆ ಬರೆದಿದ್ದಾರೆ. ಇವರು ನಮ್ಮ ಗೌಡ ಸಂಸ್ಕೃತಿಯನ್ನು ದಕ್ಷಿಣ ಕನ್ನಡ ಜಿಲ್ಲೆಯ ತುಳುವಿನ ಪಾಡ್ದನಗಳ ಆಧಾರದ ಮೇಲೆ ಬರೆದಂತೆ ತೋರುತ್ತದೆ. ಗೌಡರು ದಕ್ಷಿಣ ಕನ್ನಡ ಜಿಲ್ಲೆಗೆ 1400 ರಿಂದ 1600ನೇ ಇಸವಿಯೊಳಗೆ ಬಂದದೆಂದು ಅವರೇ ಹೇಳಿಕೊಂಡ ಮೇಲೆ ಗೌಡರು ದಕ್ಷಿಣ ಕನ್ನಡ ಜಿಲ್ಲೆಗೆ ಬಂದದೆಂದಾರೂ 1400ನೇ ಇಸವಿಗಿಂತ ಮೊದಲಲ್ಲ. ಈ ಗೌಡರಿಗಿದ್ದ ಸಂಸ್ಕೃತಿ ಏನಾಯಿತು? ಇವರು ದಕ್ಷಿಣ ಕನ್ನಡ ಜಿಲ್ಲೆಗೆ ಬಂದ ಮೇಲೆಯೇ ಸಂಸ್ಕೃತರಾದರೇ? ಹಾಗಾದರೆ ಈ ಗೌಡರ ಮದುವೆಗಳಲ್ಲಿ ಹೇಳುವ ಸೋಬಾನೆಗಳು ತುಳು ಭಾಷೆಯಲ್ಲಿಯೇ ಇರಬೇಕಿತ್ತು. ಇವರು ಹೇಳುವ ಮದು ಮಕ್ಕಳನ್ನು ಕೂರಿಸಿ ಏಳಿಸುವ ಮಾತುಗಳು ಬಣ್ಣ ಬಂಗಾರವನ್ನು ಧಾರಾ ಮಂಟಪದೊಳಗೆ ತರುವಾಗ ಅಲ್ಲಿದ್ದ ಜನರ ಸಭೆ, ದೇವ ಸಭೆಗೆ ಹೋಲಿಸಿ ದೇವಸಭೆಗೆ ಬರಲು ಅನುವು ಮಾಡಿಕೊಡಬೇಕೆಂದು ಗಂಡಿನ ಕಡೆಯವರು ಅಲ್ಲಿ ನೆರೆದಿರುವ ಸಭೆಯನ್ನು ಶುದ್ಧ ಅಪ್ಪಟ ಕನ್ನಡದಲ್ಲಿ ಕೇಳುತ್ತಾರೆ. ಇದೆಲ್ಲಾ ತುಳು ಭಾಷೆಯಲ್ಲಿರಬೇಕಿತ್ತಲ್ಲವೆ?

ಒಂದು ಜಾತಿಯ ಸಂಸ್ಕೃತಿ ಆ ಜಾತಿಯವರು ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಹೋಗಿ ನೆಲೆ ನಿಂತರೆ ನೆಲೆ ನಿಂತ ಸ್ಥಳದ ಕೆಲವು ಪದ್ಧತಿಗಳನ್ನು ಅನುಸರಿಸಬಹುದು. ಆದರೆ ಪೂರ್ತಿಯಾಗಿ ಬದಲಾವಣೆಯಾಗದು. ಉದಾಹರಣೆಗೆ ಕೊಡಗಿಗೆ ಗೌಡರು 1799ರ ಮೇಲೆ ಬಂದವರಾದರೂ ಅವರ ಉಡುಪುಗಳು (ಗಂಡಸರ ಉಡುಪು) ಬದಲಾಯಿತು. ಕೊಡಗಿಗೆ ಬಂದ ಮೇಲೆ ಕೊಡಗು ರಾಜರು ಕೊಟ್ಟ ಕುಪ್ಪಸ, ದಿಟ್ಟಿಯನ್ನು ಮದುವೆಯಲ್ಲಿಯೂ ಉಪಯೋಗಿಸಲು ಪ್ರಾರಂಭಿಸಿದರು. ಅಲ್ಲದೆ ಕೊಡಗರಲ್ಲಿ ಪದ್ಧತಿಯಲ್ಲಿದ್ದ ಅಕ್ಕಿಮುಹೂರ್ತವನ್ನೂ ಗಂಡಿನ ಮನೆಯಲ್ಲಿಯೇ ಮಾಡಿ (ಗಂಡಿಗೆ) ದಿಬ್ಬಣ ಹೋಗುವ ಪದ್ಧತಿಯನ್ನು ಅಳವಡಿಸಿ ಕೊಂಡರು. ಆದರೆ ಗೌಡರ ಮದುವೆಯ ಇತರ ಎಲ್ಲಾ ಶಾಸ್ತ್ರ ವಿಧಿಗಳನ್ನು ಯಾವುದನ್ನೂ ಬಿಡದೆ ಆಚರಿಸುತ್ತಿದ್ದಾರೆ. ಕೊಡಗಿನಿಂದ ಕೆಲವು ಜನರು ಸೈನ್ಯಕ್ಕೆ ಸೇರಿದ ಯುವಕರು ಬಂಗಾಳ ರಾಜ್ಯದಲ್ಲಿ ಕೆಲವು ಜಾತಿಗಳ ಮದುವೆಯ ಕ್ರಮಗಳು ಗೌಡರಲ್ಲಿ ನಡೆಯುವ ರೀತಿಯಲ್ಲೇ ನಡೆಯುತ್ತಿದೆ ಎಂದು ಹೇಳಿದನ್ನು ಕೇಳಿದ್ದೇನೆ. ಆದ್ದರಿಂದ ಈ ಗೌಡರ ಸಂಸ್ಕೃತಿ ದಕ್ಷಿಣ ಕನ್ನಡ ಯಾ ಹಾಸನ ಜಿಲ್ಲೆಯಲ್ಲಿ ಪ್ರಾರಂಭವಾಯಿತೆನ್ನುವ ಹಾಗೂ ತುಳು ಪಾಡ್ದನಗಳ ರೀತಿಯಲ್ಲಿ ಇವೆ ಎನ್ನುವುದು ಸರಿಯಲ್ಲ.

ನಮ್ಮ ಗೌಡರ ಸಂಸ್ಕೃತಿ ಹಿಂದೂ ಧರ್ಮದ ಸಂಸ್ಕೃತಿಯ ಅವಿಭಾಜ್ಯ ಅಂಗ. ಅದರಂತೆ ಗೌಡರ ಆಸ್ತಿ ಪಾಸ್ತಿಗಳ ಹಾಗೂ ವ್ಯವಹಾರಗಳು ಹಿಂದೂ ಕಾನೂನಿನ ಚೌಕಟ್ಟಿನಲ್ಲಿ ಬರತಕ್ಕದ್ದಾಗಿದೆ. **ನಮ್ಮ ಪಿತ್ರಾರ್ಜಿತ ಸೊತ್ತಿನ ಅಧಿಕಾರ ಯಾ ಹಕ್ಕುದಾರಿಕೆಯು ವಿಘ್ನೇಶ್ವರನು ಪ್ರತಿಪಾದಿಸಿದ ಮಿತಾಕ್ಷರ ಕಾನೂನಿನ್ವಯ ನಡೆದು ಬರುತ್ತಿದೆ.**

ಗೌಡರ ವಿವಾಹ ಪದ್ಧತಿಯೂ ಹಿಂದು "ಶ್ರುತಿ" ಮತ್ತು ಶೃತಿಯ ಆಧಾರದ ಮೇಲೆ ಅಳವಡಿಸಿದ್ದಾರೆ. ಹಿಂದೂ ಹಾಗೂ ಶೃತಿಕಾರರಾದ ಮನು ಧರ್ಮಶಾಸ್ತ್ರ, ಗೌತಮ ಧರ್ಮಶಾಸ್ತ್ರ, ಅಪಾಸ್ಥಂಬಾ ಧರ್ಮಶಾಸ್ತ್ರ, ವಿಷ್ಣು ಧರ್ಮಶಾಸ್ತ್ರ, ಅತ್ರಿ ಧರ್ಮಶಾಸ್ತ್ರ, ಹರೀತ ಧರ್ಮಶಾಸ್ತ್ರ, ಯಜ್ಞವಲ್ಕ್ಯ ಧರ್ಮಶಾಸ್ತ್ರ (ಯಜವಲ್ಕ್ಯ ವಿಶ್ವಾಮಿತ್ರ ಋಷಿಯ ಮೊಮ್ಮಗ) ಬ್ರಹಸ್ಪತಿ ಶಾಸ್ತ್ರ, ಕೌತಾಯನ ಧರ್ಮ ಶಾಸ್ತ್ರ ಮುಂತಾದ ಇನ್ನು ಹಲವಾರು ಧರ್ಮಶಾಸ್ತ್ರಗಳಿಂದ ಆರಿಸಿಕೊಂಡ ವಿಧಿವಿಧಾನಗಳನ್ನು ನಮ್ಮ ಮದುವೆ ಹಾಗೂ ಇನ್ನಿತರ ಶುಭ ಅಶುಭಕಾರ್ಯಗಳ ಆಚರಣೆಯಲ್ಲಿದೆ. ನಮ್ಮ ಜನರು ಆರ್ಯಜನಾಂಗದವರು ಬರುವುದಕ್ಕೆ ಮೊದಲೇ ಭಾರತದಲ್ಲಿ ನೆಲೆನಿಂತಿದ್ದಾರೆ ಎಂದು ಚರಿತ್ರೆಕಾರರರ ಅಭಿಪ್ರಾಯ. ನಾವು ಅಂದರೆ ಗೌಡ ರೇ ಬರೆ ಅಲ್ಲ. **ಹಿಂದೆ ಗೌಡರೂ ಸೇರಿದ್ದ ಜನಾಂಗಕ್ಕೆ ಯದು ತರ್ವಸರೆಂದು ಕರೆಯುತ್ತಿದ್ದರು,** ಯದುತರ್ವಸರು ಭಾರತಕ್ಕೆ ಬರುವ ಮೊದಲು ಯುರೋಪಿನ ಕಾಕ-ಸಸ್ ಬೆಟ್ಟ ಹತ್ತಿ ಹಾಗೂ ಕೇಸ್‌ಬಿಯನ್ ಸಮುದ್ರ ಹತ್ತಿರದ ಪ್ರದೇಶದಿಂದ ಬಂದು ನೆಲಸಿದ್ದರೆಂದೂ, ಇವರು ಮೊದಲು ಸಿಂಧೂ ನದಿ ಕಣಿವೆಯಲ್ಲಿ ವಾಸವಾಗಿದ್ದು ಆರ್ಯರು ಬಂದು ಇವರೊಡನೆ ಕಾದಾಡಿದಾಗ ಇವರಲ್ಲಿ ಕೆಲವರು ಸೌರಾಷ್ಟ್ರಕ್ಕೂ ಇನ್ನು ಕೆಲವರು ಯಮುನಾ ನದಿಯಕಡೆಗೆ ಹೋದರೆಂದೂ ಅಲ್ಲಿಯೂ ಆರ್ಯರ ದಾಳಿ ಬಂದಾಗ ಗಂಗಾನದಿಯಪ್ರದೇಶಕ್ಕೂ ಅಲ್ಲಿಂದ ಬಂಗಾಳಕ್ಕೂ ಬಂದು ನೆಲಸಿ ಹಲವಾರು ಕಾರಣಗಳಿಂದ ದಕ್ಷಿಣ ಭಾರತಕ್ಕೆ ಬಂದರೆಂದೂ ಅವರೇ ಚೇರ, ಚೋಳ, ಪಾಂಡ್ಯ, ರಾಷ್ಟ್ರಕೂಟ ರಾಜ್ಯವನ್ನು ಸ್ಥಾಪಿಸಿದವರೆಂದೂ ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ಅದರಂತೆ ಈಗಿನ ಹಳೇ ಮೈಸೂರಿನ ಒಕ್ಕಲಿಗರು, ಕೊಡಗು ಮತ್ತು ದ. ಕ. ಜಿಲ್ಲೆಯ ಗೌಡರು, ಆಂಧ್ರದ ಕಮ್ಮ, ಕಾಪು ಜಾತಿಯ ರೆಡ್ಡಿಗಳೂ, ವೆಲ್ಲಂಗಾರರೂ ತಮಿಳುನಾಡಿನ ವೆಲ್ಲ ಮತ್ತು ಕೇರಳದ ವೆಲ್ಲಾಳಗೌಂಡರೂ ಎಂದು ಹೇಳುತ್ತಾರೆ

ಹಾಗಿರುವಾಗ "ಗೌಡರ ಸಂಸ್ಕೃತಿ ಮತ್ತು ಪದ್ದತಿಗಳು ಬರೆ ತುಳು ನಾಡಿನ ಪದ್ಧತಿ ಎನ್ನುವುದು ಸರಿಯಲ್ಲ.

ಹಿಂದೂ ಧರ್ಮಶಾಸ್ತ್ರಗಳಲ್ಲಿ ಅಳವಡಿಸಿದ ಶೃತಿ ಕಾರರ ಆದೇಶಗಳನ್ನು ಆಯಾಯಾ ಜಾತಿಯ ಧರ್ಮ ಗುರುಗಳು, ಆಯಾಯ ಜಾತಿಯ ಎಲ್ಲಾ ಪದ್ಧತಿಗಳಲ್ಲಿ ಅಳವಡಿಸಿ ಆಪದ್ಧತಿಗಳು ಹಾಳಾಗದೆ ಉಳಿಸಿಕೊಂಡು ಬರಲು ಕಟ್ಟೆಮನೆ ಪದ್ಧತಿಯನ್ನು ಅಳವಡಿಸಿದ್ದಾರೆ. ಕಟ್ಟೆಮನೆ ಗೌಡರು, ಮಾಗಣೆಗೌಡರು ಗ್ರಾಮಗೌಡರಿಗೆ ಅವರ ಜಾತಿಯ ಪದ್ದದತಿಗಳಲ್ಲಿ ತಪ್ಪಾದರೆ ಅದನ್ನು ಸರಿಪಡಿಸುವ ಅಧಿಕಾರವು ಇತ್ತು. ತಪ್ಪು ಮಾಡಿದವರಿಗೆ ಶಿಕ್ಷೆ ಕೊಡುವ ಅಧಿಕಾರವೂ ಇತ್ತು. ಈ ಜಾತಿಯ ವ್ಯವಸ್ಥೆಯನ್ನು ಆಯಾಯ

ಪ್ರದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದ ರಾಜರು ಹಾಗೂ ನಾಯಕರು ಮನ್ನಿಸುತ್ತಿದ್ದರು. ಕರ್ನಾಟಕದ ಎಲ್ಲಾ ಕಡೆಯ ಗ್ರಾಮೀಣ ಜನತೆಯಲ್ಲಿ ಈ ಕಟ್ಟೆಮನೆ ಪದ್ಧತಿ ಇದೆ. ಆದ್ದರಿಂದ ಆಯಾಯ ಜಾತಿಯ ಧರ್ಮಗುರುಗಳು ತಮ್ಮ ಜಾತಿಯ ಕಟ್ಟು ಕಟ್ಟಳೆಗಳನ್ನು ಆಯಾಯ ಕಟ್ಟೆ ಮನೆಗಳ ಮುಖಾಂತರ ತಮ್ಮ ಜಾತಿಪದ್ಧತಿವಳು ಕ್ರಮವಾಗಿನಡೆಯುವಂತೆ ನೋಡಿಕೊಂಡಿದ್ದಾರೆ. ಆರೀತಿ ಇರುವುದರಿಂದಲೇ ನಮ್ಮ ಹಿಂದೂ ಸಂಸ್ಕೃತಿ ಎಷ್ಟೇ ಪರಕೀಯ್ಯ ದಾಳಿಗೆ ಸಿಕ್ಕಿದರೂ ಅಳಿಯದೆ ಉಳಿದಿದೆ.

...ನ್ನೊಂದು ವಿಷಯ ಡಾ. ಪುರುಷೋತ್ತಮ ಬಿಳಿಮಲೆಯವರು ಹೇಳಿದ...ತುಗಳ್ನು ಈ ಕೆಳಗೆ ಕೊಟ್ಟಿದ್ದೇನೆ.

**5...ಹೆಣ್ಣು ಮೈ ನೆರೆತಾಗ ಆಚರಣೆಯಲ್ಲಿ ಹೆಣ್ಣಿನ ಮೇಲೆ ಸೋದರ ಮಾವನಿಗೆ ಇರುವ ಲೈಂಗಿಕ ಹಕ್ಕು ನಿಚ್ಚಳವಾಗಿ ಕಾಣಿಸುತ್ತದೆ ಮೈನೆರೆದ ಏಳು ದಿವಸಗಳವರೆಗ ಆಕೆಗೆ ಹೊಲೆ ಇರುತ್ತದೆ. ಏಳನೇ ದಿನ ಆಕೆ 'ಮಡಿ' ಆಗುತ್ತಾಳೆ. ಆ ದಿವಸ ಮೈಗೆ ಅರಸಿನ ತಿಕ್ಕಿದ ಆಕೆ ಒನಕೆಯನ್ನು ದಾಟಬೇಕು ಮತ್ತೆ ವೀಳ್ಯವನ್ನು ತಿನ್ನಬೇಕು. ಇದಾದ ಅನಂತರ ಸೋದರಮಾವ ಆಕೆಯನ್ನು ಕರೆದುಕೊಂಡು ತನ್ನ ಮನೆಗೆ ಹೋಗುತ್ತಾನೆ.**

ಇದನ್ನು ಓದುಗರೇ ಓದಿಕೊಳ್ಳುವುದಕ್ಕೆ ಹಾಗೂ ಅದರ ಅಭಿಪ್ರಾಯ ಮಾಡಲು ಬಿಟ್ಟಿದ್ದೇನೆ.

ಭಾರತೀಯ ಸಂಸ್ಕೃತಿಯಲ್ಲಿ ತಾಯಿಗಿರುವ ಗೌರವ ಇನ್ನಾವುದೇ ಸಂಸ್ಕೃತಿಯಲ್ಲಿಲ್ಲವೆಂದು ಹೇಳಬಹುದು. ಕರ್ನಾಟಕದ ಜಾನಪದಗೀತೆಗಳು ಮಗಳ ತೌರುಮನೆಯ ಹಂಬಲವನ್ನು ಪ್ರತಿಯೊಬ್ಬರ ಹೃದಯ ಕರಗುವ ರೀತಿಯಲ್ಲಿ ವರ್ಣಿಸಿದ್ದಾರೆ. ಇದರಿಂದ ಮಗಳಿಗೆ ತಾಯಿಯ ಮೇಲಿನ ಪ್ರೀತಿ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಸೂಚಿಸುತ್ತದೆ. ಅದೇ ರೀತಿ ತಾಯಿಯ ಸಹೋದರನ ಮೇಲಿನ ಪ್ರೀತಿ ತಾಯಿಯಾದವಳು ತನ್ನ ತೌರುಮನೆಯವರು ತನ್ನ ಮಕ್ಕಳ ಮದುವೆಗೆ ಬರುವಾಗ ಆದರದಿಂದ ಸ್ವಾಗತಿಸಿ ಸೋದರ ಮಾವನಿಗೆ ಮದುವೆಯ ಹಂತ ಹಂತದಲ್ಲಿ ಮಾರ್ಯದೆ ಕೊಟ್ಟು ಕರೆದು ಹೆಣ್ಣನ್ನು/ಗಂಡನ್ನು ಎಲ್ಲಾ ಶಾಸ್ತ್ರಗಳಿಗೆ ಪ್ರಾರಂಭ ಮಾಡುವಾಗ ಸೋದರಮಾವನ ಇರುವಿಕೆ ಇಲ್ಲದೆ ಕಾರ್ಯನಡೆಯುವುದಿಲ್ಲ. ಕಾಸಾಕಾಳಿಯನ್ನು ಸೋದರ ಮಾವ ಅಥವಾ ಅವರ ಮಕ್ಕಳು ಕಟ್ಟಬೇಕು ಹೆಣ್ಣನ್ನು **ಧಾರಾ ಮುಂಟಪಕ್ಕೆ ಕರೆತರುವಾಗ ಸೋದರ ಮಾವನೇ ಹೊತ್ತು ತರುತ್ತಾನೆ. ಅಣ್ಣ ಯಾ ತಮ್ಮನ ಹೆಂಡತಿ ಹೊಸದಾಗಿ ತಮ್ಮ ಮನೆಗೆ ಬಂದು ನಾಗೊಳಿ ಶಾಸ್ತ್ರದ ದಿನ ಮದುಮಗಳು ನೀರು ತಂದು ಮನೆ ಹತ್ತಿದಾಗ ಬಾಗಿಲನ್ನು ಮದುಮಗಂಡಿನ ತಂಗಿಯಾಗಲೀ ಅಕ್ಕನಾಗಲೀ ತಮ್ಮ ನಾದಿನಿ ಯಾ ಅತ್ತಿಗೆಯನ್ನು ಅವರಿಗೆ (ನವ ದಂಪತಿಗಳಿಗೆ) ಹೆಣ್ಣು ಹುಟ್ಟಿದರೆ ತನ್ನ ಮಗನಿಗೆ ಕೊಡಬೇಕೆಂದು ಗಂಡು ಹುಟ್ಟಿದರೆ ತನ್ನ ಮಗಳನ್ನು ತೆಗೆದುಕೊಂಡು ಹೋಗ ಬೇಕೆಂದು ಭಾಷೆ ತೆಗೆದು ಕೊಳ್ಳುತ್ತಾರೆ.** ಈ ಎಲ್ಲಾ ಪದ್ಧತಿಗಳು ತಾಯಿಯ ಸಹೋದರ ಸಂಬಂಧವನ್ನು ಮುಂದಕ್ಕೂ ಮುಂದುವರಿಸಿ ಕೊಂಡು ಹೋಗ ಬೇಕೆಂಬ ಪ್ರೀತಿಯ ತನ್ನ ತೌರಿನ ಸಂಬಂಧವನ್ನು ಕಡಿದುಕೊಳ್ಳಬಾರದೆಂಬ ತಾಯಿಯ ಮನದ ಪ್ರೀತಿ ಹಾಗೂ ಪ್ರೇಮದಿಂದಲ್ಲದೆ ಡಾ. ಪುರುಷೋತ್ತಮ ಬಿಳಿಮಲೆಯವರು ಬೀಳುವ ಹಾಗೆ ಹೆಣ್ಣು ಮೈನೆರೆದಾಗ ಆಚರಣೆಯಲ್ಲಿ ಹೆಣ್ಣಿನ ಮೇಲೆ ಸೋದರ ಮಾವನಿಗೆ ಲೈಂಗಿಕ ಹಕ್ಕು ನಿಚ್ಚಳವಾಗಿ ಕಾಣಿಸುತ್ತದೆ ಎಂಬ ಮಾತು ಸೋದರ ಮಾವನ ಹಾಗೂ ಸೋದರ ಸೊಸೆಯ ಸಂಬಂಧದ ಕಲ್ಪನೆ ತುಂಬಾ ಬೇಸರವನ್ನು ತರುವ ಸಂಗತಿಯಾಗಿದೆ ಎಂದು ಹೇಳಬಹುದು.

ಗೌತಮನ ಧರ್ಮಶಾಸ್ತ್ರದಲ್ಲಿ ದಕ್ಷಿಣದಲ್ಲಿ ಸೋದರ ಮಾವನ ಮಗ ಅವನ ತಂದೆ ಯಾ ತಂಗಿ ಯಾ ಅಕ್ಕನ ಮಗಳೊಡನೆ ಮದುವೆಯ ವಿಷಯ ಹೇಳಿದ್ದಾನೆ ಹೊರತು, ಸೋದರ ಮಾವನೆ ಅಕ್ಕ ಯಾ ತಂಗಿಯ ಮಗಳೊಡನೆ ಮದುವೆಯಾಗುವ ವಿಷಯ ಇಲ್ಲ, ಉತ್ತರದಲ್ಲಿ ಸೋದರ ಮಾವನ ಮಗನ ಜೊತೆಯಲ್ಲಿ ಅಕ್ಕ ಯಾ ತಂಗಿಯ ಮಗಳ ಮದುವೆ ನಿಶಿದ್ಧ, ಅದೇ ರೀತಿ 1955ನೇ ಇಸವಿಯಲ್ಲಿ ಹೊರಡಿಸಿದ ಹಿಂದೂ ವಿವಾಹ ಕಾನೂನಿನ ಸೆಕ್ಷನ್ 3 ಉಪಸೆಕ್ಷನ್ ಯಲ್ಲಿ ಸೋದರ ಮಾವನ ಮಕ್ಕಳ ಸಂಬಂದವನ್ನು ನಿಷೇದ ಸಂಬಂದದ ಪದ್ಧತಿಯಲ್ಲಿ ಸೇರಿಸಿದೆ.

ಆದ್ದರಿಂದ ಡಾ. ಪುರುಷೋತ್ತಮ ಬಿಳಿಮಲೆಯವರು ಹೇಳಿದಂತೆ ಸೋದರ ಮಾವನಿಗೆ ಆತನ ತಂಗಿ ಅಥವಾ ಅಕ್ಕನ ಮಗಳ ಮೇಲೆ ಲೈಂಗಿಕ ಸಂಬಂಧದ ಹಕ್ಕು ಕಾನೂನು ರೀತಿಯಲ್ಲಾಗಲೀ ಅಥವಾ ಹಿಂದೂ ಧರ್ಮಶಾಸ್ತ್ರದಲ್ಲಾಗಲೀ ಇಲ್ಲ.

**ಪ್ರೊ. ಪೂಜಾರಿ ಮೊಣಪ್ಪ**

---

## ನಗೆ ಹನಿ

ಅಳಿಯನನ್ನು ಕರೆಸಿದಳು ಹಬ್ಬಕೆಂದು ಅತ್ತೆ
ಅಂದೆ ಬಗೆ ಬಗೆ ತಿಂಡಿ ತಿನಿಸುಗಳು ಮತ್ತೆ
ಅತಿಯಾದ ಆದರದ ಗುಟ್ಟೇನು ಗೊತ್ತೆ?
ಅಳಿಯನ ಜೇಬುಗಳಲ್ಲಿನ ನೋಟುಗಳು ನಾಪತ್ತೆ

**ತುಮ್ಮಜ್ಜೀರ ದಿವ್ಯ ಉಲ್ಲಾಸ್, ಮೈಸೂರ್**

## ಏನಾಗುತ್ತೆ?

ನಾವು ಬಸ್ ಮೇಲೆ ಹೋದ್ರೆ ಪ್ರಯಾಣ - ಆಗುತ್ತೆ
ಬಸ್ ನಮ್ಮ ಮೇಲೆ ಹೋದ್ರೆ ಪ್ರಾಣ - ಹೋಗುತ್ತೆ
ಹೆಂಗಸರ ಗಂಡ ಸತ್ರೆ ವಿಧವೆ - ಆಗ್ತಾರೆ
ಗಂಡಸರ ಹೆಂಡ್ತಿ ಸತ್ರೆ ಮದುವೆ - ಆಗ್ತಾರೆ.

ಉಳುವಾರನ ತನು ಭೀಮಯ್ಯ, ಮೈಸೂರು

# ಹಳ್ಳಿಂದ - ಬೆಂಗ್‌ಳೂರ್‌ಗೆ

ಕೂಸಣ್ಣನ ಮನೆ ಹತ್ರ ಒಂದು ಕೆರೆ ಇತ್ತ್, ಆ ಕೆರೆಲಿ ಮೊರೆಂಟೆ ಮೀನ್‌ಗ, ಬರೆ ಮೀನ್‌ಗ, ಕೊಯಿಲೆ ಮೀನ್‌ಗ, ತುಂಬಾ ಇದ್ದೋ, ಮತ್ತೆ ದೊಡ್ಡ ದೊಡ್ಡ ಕಪ್ಪೆಗ ಅಂತು ಹೇಳಿಕೆ ಬತ್ತ್, ಅಜ್ಜಿಕಪ್ಪೆ ಮತ್ತೆ ಡೊಂಟರ್ ಕಪ್ಪೆಗಳ ಕಾಟ ಹೇಳಿಕೆ ಬತ್ತ್. ಅಂದರೆ ಬೇಸಿಗೆ ಬಾತ್‌ತ ಹೇಳ್‌ಕನ ಕೆರೆ ನೀರ್ ಕಮ್ಮಿಯಾಗಿ ಮೀನ್ ಕಪ್ಪೆಗಳ್ಗೆ ತುಂಬಾ ಕಷ್ಟ ಆತೀತ್. ಹಿಂಗೇ ಇರ್‌ಕನ, ಒಂದು ದಿನ ದೊಡ್ಡ ಮಳೆ ಬಾತ್, ಆ ಮಳೆ ಬಂದದ್ದೆ ಬಂದದ್ ಕೆರೆ ತುಂಬಿ ಎಲ್ಲಿ ಇತ್ತೋ ಏನೋ ಮೀನ್‌ಗಳಿಗೆ ಈಜಾಟ, ಕಪ್ಪೆಗಳಿಗೆ ಹಾರಾಟ ಅಂತೂ ಕೆರೆಗೆ ಒಂದ್ ಸಲ ಹಾರುದು, ಕರೆಗೆ ಒಂದು ಸಲ ಹಾರುದು ಖುಷಿಯೋ ಖುಷಿಲಿ ವಟ ಗುಟ್ಟಿಕೆ ಸುರು ಮಾಡ್ದೋ. ಕತ್ತಲಾದೇ ತಡ ಕಪ್ಪೆಗಟಿ ಗ್ರಾಂ... ಗ್ರಾಂ.... ಗ್ರಾಂ.... ತ್ತಾ ಕಿರಿಚಿಕೆ ಸುರು ಮಾಡುವೆ. ಬೆಳಗೆಮುಟ್ಟ ಕೇಳಿ ಕಿವಿ ಮಂದ ಕಟ್ಟಿ ಹೋದೆ.

ಹಿಂದೆ ಅಜ್ಜಂದರ್ ಹೇಳ್‌ತ್ತಿದ್ದೋ ಸಾವಿರಾರು ಕಪ್ಪೆಗ ಗ್ರಾಂ.. ಗ್ರಾಂ... ಗ್ರಾಂ... ತ ಕಿರ್‌ಚ್‌ಕನ ಒಂದು ದೊಡ್ಡ ಅಜ್ಜಿಕಪ್ಪೆ ಕಿಲೋ ಕಿಲೋತ್ತಾ ಕಿರ್‌ಚೀತ್‌ಗಡ, ನಾವು ಸಹ ಅದನ್ನ ಆಲಿಸಿಕೇಳಿರೆ ನಮಗೆ ಕೂಡ ಅದೇ ಕೇಳುದು, ಅದಕ್ಕೆ ಈಗಿನವು ಒಂದು ಲೆಕ್ಕಂತ ಇಡನ್ನಾಂತ ಹೇಳಿ ಅದೇ ಪ್ರಕಾರ 1ಕಿಲೋಕ್ಕೆ 1000ಗ್ರಾಂತ ಹೇಳುವೆ. ಅದಿರಲಿ ಅಂದ್ ಮಳೆಗೆ ಸರಿಯಾಗಿ ಕೂಸಣ್ಣನ ಮನೆಗೆ ಬೆಂಗ್‌ಳೂರ್‌ದ ನಂಟರು ಬಂದೋ. ಬಂದ ನೆಂಟರ್ 15ದಿನ ಇದ್ದೋ. ಕೂಸಣ್ಣನ ಮನೆ ಸುತ್ತಾ ಕಾಡ್‌ಗ. ಅಂತೂ ಅಲ್ಲಿದ್ ವಾತವರಣ ನೆಂಟಂಗ ತುಂಬಾ ಹಿಡಿಸಿತ್, ಪೇಟೆ ನೋಡ್ದ ನೆಂಟರಿಗೆ ಹಳ್ಳಿ ತುಂಬಾ ಖುಷಿಯಾತ್. ಕಾಫಿಗಿಡಗ ಬಾಳೆತೋಟ ಒಳ್ಳೆಮೆಣಸುಬಳ್ಳಿ, ದೊಡ್ಡ ದೊಡ್ಡ ಮರಗ, ಕತ್ತಲಾಕನ ಹಕ್ಕಿಗಳ ಚಿಲಿಪಿಲಿ ಸದ್ದ್, ಕಪ್ಪೆಗ ವಟಗುಟ್ಟುದು, ಕೊಟ್ಟಿಗೆಲಿ ದನಕರುಗ ಗೂಡ್‌ಲಿ ಒಂದು ಕಡೆ ಕೋಳಿಗ. ಹಂದಿ ಒಂದು ಕಡೆ ಇಂತಹ ಸಾಕಿದ ಪ್ರಾಣಿಗಳ್ನ ನೋಡ್‌ದ ನೆಂಟರಿಗೆ ಇಂತಹ ಪರಿಸರ ಪ್ರಕೃತಿ ಸೌಂದರ್ಯ ನೆಂಟರ ಮನಸ್ಸಿಗೆ ತುಂಬಾ ಹಿಡಿಸಿತ್. ದಿನಕ್ಕೆ ಒಂದೊಂದು ಜಾಗಕ್ಕೆ ಹೋದು ಅಲ್ಲಿನ ಜನರ ನಡೆ, ನುಡಿ, ಅಲ್ಲಿನ ಭಾಷೆ ಎಲ್ಲಾ ಒಂದು ತರಹದ ಅನುಭವ ಆತಿತ್. ಅಲ್ಲಿನ ಜನ ದಿನ ಕೂಲಿ ಮಾಡಿ ಆ ದಿನದ ಕೆಲಸ ಮುಗಿಸಿಕಂಡ್ ಕತ್ತಲಾಕನ ಮೀದ್ ದೇವರ ಗ್ಯಾನ ಮಾಡಿಕಂಡ್ ಸುತ್ತ ಮುತ್ತ ಜನ ಹಿರಿಯವು ಆದ ಒಬ್ಬರ ಮನೆಲಿ ಎಲ್ಲಾವು ಸೇರುತ್ತಿದ್ದೋ. ಅಲ್ಲಿ ರೇಡಿಯೋ ಮೂಲಕ ಚಿತ್ರ ಗೀತೆ ಹಾಡನ್ನ ಕೇಳಿಕಂಡ್, ಮತ್ತೆ ಸಣ್ಣ ಸಣ್ಣ ಹೈದಂಗ ಕೋಲಾಟ ಆಡುದನ್ನ ನೋಡಿ ಸಂತೋಷ ಪಡ್‌ತಿದ್ದೋ. ಹೆಣ್ಣ್ ಜನ ಬಿಸಿ ಬಿಸಿ ಅಡುಗೆ ಮಾಡಿ ಊಟಕ್ಕೆ ಕರೆದ್ ಬಡ್‌ಸಿತ್ತದ್ದೋ. ಊಟ ಆದ ಮೇಲೆ ಸುಸ್ತಾದ ಜೀವಕ್ಕೆ ಹಾಯಾಗಿ ನಿದ್ದೆ ಜೊಂಪ್ ಹತ್‌ತಿತ್. ಕೋಳಿ ಕೂಂಗ್‌ವ ಹೊತ್ತಿಗೆ ಪುನಃ ಅವರ ನಿತ್ಯ ಕೆಲಸ ಕಾರ್ಯನ, ಅಂದ್ ಮಧ್ಯಾಹ್ನನಕ್ಕೆ ಬೇಕಾದ ಬುತ್ತಿ ರೆಡಿ ಮಾಡಿ ಕಾಫಿ ಕುಡ್‌ದ್ ಹೊರೋಟೋ. ಇದನ್ನೆಲ್ಲಾ ನೋಡ್ದ ನೆಂಟರಿಗೆ ತುಂಬಾ ಆಶ್ಚರ್ಯ ಆತಿತ್. ನೆಂಟರಲಿ ಒಂದು ಗೂಡೆ ಅವಳ ಹೆಸರ್ ಲಾಲಿ ತ.

ಒಂದು ದಿನ ಲಾಲಿ ಸುತ್ತಾಡಿ ಕಂಡ್ ಬಂದ್ ಕೆರೆ ದಂಡೆ ಮೇಲೆ ಕುದ್ದತ್ ಅಲ್ಲಿನ ಜನರ ಬಟ್ಟೆಬರೆ ನೋಡಿ ತುಂಬಾ ವಿಚಿತ್ರದಂಗೆ ಕಂಡತ್. ಆದರೂ ಅಲ್ಲಿನ ಜನ ಕನ್ನಡ ಭಾಷೆ ಕಲಿತ್ತಿದ್ದೊ. ಆದರೇ ನೆಂಟರ ಲಾಲಿಗೆ ಕನ್ನಡ ಭಾಷೆ ಹೆಚ್ಚಿಗೆ ಗೊತ್ತಿಲ್ಲದಿದ್ದರು ಒಂದೊಂದು ಅಪ್ಪಿ ತಪ್ಪಿ ಕನ್ನಡ ಅರ್ಥ ಮಾಡಿಕಂಡ್ ಮಾತನಾಡ್‌ತಿತ್. ನಾವು ಬೆಂಗಳೂರಿಲಿ ಇಂತ ಜನರ ಉಡಿಗೆ ತೊಡಿಗೆ ಕಂಡತ್‌ಲ್ಲೆ, ಏನಿದ್ದರೂ ಪ್ಯಾಂಟ್ ಶರ್ಟ್ ಹಾಕಿಕಂಡ್ ಕಾರ್, ಜೀಪು, ಬೈಕ್, ಇಂತಹದಲ್ಲೇ ಓಡಾಡ್ದು, ಬೆಂಗಳೂರುತ್ತಾ ಹೇಳಿರೆ ಪ್ಯಾಷನ್‌ಗೆ ಕಮ್ಮಿ ಇಲ್ಲೇ.

ಅಲ್ಲಿನ ಜನ ಪಾರ್ಕ್‌ಗಳಿಗೆ ಹೋದು, ಸಿನಿಮಾ ನೋಡ್ದು ಟೇಪ್ ರೆಕಾರ್ಡ್ ಹಾಕಿಕಂಡ್ ಕುಣಿಯದು ಅಲ್ಲಿನ ಜನರ ರೀತಿಯಾಗಿತ್. ಲಾಲಿ ಯೋಚನೆ ಮಾಡ್‌ತ್ತ ಬೆಂಗಳೂರು ನೋಡಿಕೆ ತುಂಬಾ ಲಾಯಿಕ್. ಅಂದರೆ ಜೀವನ ನಡೆಸಿಕ್ಕೆ ತುಂಬಾ ಹಣ ಬೇಕ್, ಹಣ ಇದ್ದರೆ ಪೇಟೆ ಲಾಯ್ಕ. ಇದ್‌ಕ್ಕೆ ಒಂದು ಗಾದೆ ಉಟ್ಟು. ಪೇಟೆ ನೋಡಿಕೆ ಲಾಯಿಕ್. ಹಳ್ಳಿ ಬಾಳಿಕೆ ಲಾಯಿಕ್‌ತ ಅದ್ ಮಾತ್ರ ಸುಳ್ಳು ಅಲ್ಲಾತ ಹೇಳಕ್, ಅಕ್ಷರಸ್ತ ನಿಜಸ.

ಹಿಂಗೆ ಆಲೋಚನೆ ಮಾಡಿಕಂಡ್ ಇದ್ದ ನೆಂಟರ ಲಾಲಿನ ಕಾಲ್ ಹತ್ತರ ದೊಡ್ಡ ಕಪ್ಪೆ ಬಂದ್ ಹಾರಿ ಕುದ್ದತ್. ಅದನ್ನ ಕಂಡ ಲಾಲಿ ಗೂಡೆ 'ಕಿಟಾರನೆ' ಕಿರಿಚಿಕಂಡ್ ಓಡಿಕೆ ನೋಡ್ತ್. ಆಗ ಕಪ್ಪೆ ಓಡ್‌ಬ್ಯಾಡತ್ತಾ ಅದರ ಭಾಷೆಲಿ ವಟಗುಟ್ಟಿತ್. ಕಪ್ಪೆ ಅದರದೆ ಭಾಷೆಲಿ ಲಾಲಿ ಗೂಡೆನ ಕೇಳ್ತ್ ನೀನ್ ಬೆಂಗಳೂರ್ ಸುತ್ತಿ ಬಂದೊಳ ತುಂಬಾ ಲಾಯಿಕ್ ಉಟ್ಟಾ? 'ನನ್ನನ ಒಂದು ಸರ್ತಿ ಬೆಂಗಳೂರ್‌ಗೆ ಕರ್‌ಕಂಡ್ ಹೋದಿಯಾ?ತಾ ಕೇಳ್‌ತ್. ಅದ್‌ಕೆ ಲಾಲಿ ಗೂಡೆ "ನಿನ್ನ ನೋಡಿ ಜನ ಓಡುವೆ ನಿನ್ನ ಮುಖನ ಒಂದು ಸಲ ಕನ್ನಡಿಲಿ ನೋಡ್‌ಕ ಆ ನಿನ್ನ ಮಂಟೆ ಕಣ್ಣ್, ಮೊರದ ಅಗಲ ಬಾಯಿ, ನಿನ್ನ ಚಕ್ಕಳದ ಬಣ್ಣವೋ, ಹುಲಿ ಇದ್ದಂಗೆ ಒಳ, ಜನ ನಿನ್ನ ನೋಡಿ ಹೆದರುವೇ" ಅದಕ್ಕೆ ಏನು ಮಾಡಕುತಾ ಹೇಳಿಯಾ? ನಿನ್ನ ಹೆಂಗೆ ಕರ್‌ಕೊಂಡು ಹೋದುತ್ತಾ ಗ್ಯಾನ ಮಾಡದು. ನಂಗೆ ಬೆಂಗಳೂರ್ ನೋಡಕುತ್ತಾ ಅಜ್ಜಿ ಕಪ್ಪೆ ಹಟ ಹಿಡ್‌ತ್. ನಾನೊಂದು ಉಪಾಯ ಹೇಳಿನೆ. ನೀನ್ ನನ್ನಂಗೆ ಡ್ರಸ್ ಮಾಡಿಕಂಡ್ ಬಾ ಆಗ ಜನ ನಿನ್ನ ನೋಡಿ ಬಾಯಿಗೆ ಬೆರಳ್ ಇಟ್ಟ್‌ಕಂಡ್ ನೋಡುವೇ. " ಹೆಂಗೋ ಒಟ್ಟಾರೇ ನನ್ನ ಕರಕೊಂಡು ಹೋಗುತ ಹೋಳ್ತ್. ನಾನೇ ಕರಕಂಡ್ ಹೋನೆ ನೀನ್ ಬ್ಯಾಸರ ಮಾಡ್ ಬ್ಯಾಡತಾ ಹೇಳ್‌ತ್ ಲಾಲಿ. ನೀನ್ ನಾಳೆ ಬೆಳ್ಳಿಗೆನೆ ಹೊರೊಡೋಕು ನೀನ್ ರೆಡಿಯಾಗ್‌ತ ಹೇಳಿ ಲಾಲಿ ಮನೆಕಡೆಗೆ ಹೊರಟತ್.

ಲಾಲಿ ಗೂಡೆಗೆ ಬೆಂಗಳೂರ್‌ಗೆ ಹೊರಡಕಾಕನ ಸ್ವಲ್ಪ ಲಗ್ಗೇಜ್ ಇತ್ತ್ ಅದ್ ಹುಳಿ ಹಣ್ಣ್, ಹಲ್‌ಸಿನ ಹಣ್ಣ್, ಮಾವಿನ ಹಣ್ಣ್, ಬಾಳೆಹಣ್ಣ್ ಹಿಂಗೆ ಸುಮಾರ್ ಲಗ್ಗೇಜ್ ಇತ್ತ್. ಕಪ್ಪಗೆ ಒಂದ್ ಐಡಿಯಾ ಹೊಳ್‌ತ್. ಅದ್ ಹೋಗಿ ಹಣ್ಣ

18ನೇ ಪುಟಕ್ಕೆ

# ವನಿತಾ ಲೋಕ

ಲೇಖನ : ಗೃಹ ಸಂಗಾತಿ

## ಮಸಾಲೆ ಪುಡಿ

**ಬೇಕಾಗುವ ಸಾಮಾನು :** ½ ಕಪ್ ಎಳ್ಳು, 4 ಕಪ್ ಕೊತ್ತಂಬರಿ ಬೀಜ, 7-8 ಏಲಕ್ಕಿ, 25 ಗ್ರಾಂ ಗಸಗಸೆ, ½ ಕಪ್ ಜೀರಿಗೆ, 20ಗ್ರಾಂ ಇಂಗು, 25 ಗ್ರಾಂ ದಾಲ್ಚಿನ್ನಿ, 1 ಬಟ್ಟಲು ಒಣಕೊಬ್ಬರಿ(ತುರಿದು), 1 ಊ.ಚ. ಮೆಂತೆ, 1 ಊ.ಚ. ಕರಿಮೆಣಸಿನ ಕಾಳು, ಬೇಕಾದರೆ ಸ್ವಲ್ಪ ಕಲ್ಹೂವು, ಚಕ್ರಮಗ್ಗಿ ಮತ್ತು ಮರಾಠಿ ಮಗ್ಗಿ, ಎಣ್ಣೆ, 10 ಲವಂಗ.

**ವಿಧಾನ :** ಬಾಣಲೆಯಲ್ಲಿ ಎಣ್ಣೆ ಕಾಯಿಸಿ ಅದರಲ್ಲಿ ಕರಿಮೆಣಸು, ಇಂಗು, ಲವಂಗ, ದಾಲ್ಚಿನ್ನಿ, ಚಕ್ರಮಗ್ಗಿ, ಮರಾಠಿ ಮಗ್ಗಿ, ಇವುಗಳನ್ನು ಹಾಕಿ ಕಂದು ಬಣ್ಣಕ್ಕೆ ಬರುವ ತನಕ ಹುರಿಯಿರಿ, ಆಮೇಲೆ ಉಳಿದ ಎಣ್ಣೆಯಲ್ಲಿ ಜೀರಿಗೆ, ಕಲ್ಹೂವುಗಳನ್ನು ಹುರಿಯಿರಿ, ನಂತರ ಗಸಗಸೆ ಮತ್ತು ಎಳ್ಳು ಬೇರೆ ಬೇರೆಯಾಗಿ ಹುರಿಯಿರಿ, ನಂತರ ಕೊತ್ತಂಬರಿಗೆ ಸ್ವಲ್ಪ ಎಣ್ಣೆ ಹಚ್ಚಿ ಅದನ್ನು ಹುರಿಯಿರಿ, ಆ ಬಳಿಕ ಒಣಕೊಬ್ಬರಿ ಕುಟ್ಟಿ ಪುಡಿಮಾಡಿ ಡಬ್ಬಿಯಲ್ಲಿ ಹಾಕಿಟ್ಟುಕೊಳ್ಳಿ.

## ಗರಂ ಮಸಾಲೆ ಪೌಡರ್

**ಬೇಕಾಗುವ ಸಾಮಾನು :** 2 ಊ.ಚ. ಕರಿಮೆಣಸಿನಕಾಳು, ಕಪ್ ಕೊತ್ತಂಬರಿ ಬೀಜ, 2 ಊ.ಚ. ಗಸಗಸೆ, 6 ತುಂಡು ದಾಲ್ಚಿನ್ನಿ, 1 ಕಪ್ ಒಣಮೆಣಸಿನಕಾಯಿ 1 ಊ.ಚ. ಮೆಂತೆ. ½ ಅಂಗುಲದಷ್ಟು ಅರಿಸಿನ ತುಂಡು, 2 ಊ.ಚ. ಜೀರಿಗೆ 4 ಊ.ಚ. ಎಳ್ಳು, 25 ಲವಂಗ.

**ವಿಧಾನ :** ಮೇಲೆ ಹೇಳಿದ ಎಲ್ಲಾ ಜಿನಸುಗಳನ್ನು ಎಣ್ಣೆ ಮುಟ್ಟಿಸದೆ ಬೇರೆ ಬೇರೆಯಾಗಿ ಹುರಿದು ಪುಡಿಮಾಡಿ, ಆಮೇಲೆ ಅವುಗಳನ್ನೆಲ್ಲಾ ಬೆರಸಿ ಬಾಟಲಿಯಲ್ಲಿ ಹಾಕಿ ಇಟ್ಟುಕೊಳ್ಳಿ.

## ಖಾರ ಮಸಾಲೆ

**ಬೇಕಾಗುವ ಸಾಮಾನು :** 500 ಗ್ರಾಂ ಕೊತ್ತಂಬರಿ ಬೀಜ, 700 ಗ್ರಾಂ ಒಣ ಮೆಣಸಿನ ಕಾಯಿ, 25 ಗ್ರಾಂ ಇಂಗು, 500 ಗ್ರಾಂ ಈರುಳ್ಳಿ, 1 ಕಪ್ ಒಣಕೊಬ್ಬರಿ(ತುರಿದು), 1 ಗೊಂಚಲು ಕೊತ್ತಂಬರಿ ಸೊಪ್ಪು, 1 ಗೊಂಚಲು ಕರಿಬೇವಿನ ಸೊಪ್ಪು, 20 ತುಂಡು ಅರಿಸಿನ, 20 ಗ್ರಾಂ ಉಪ್ಪು, 1 ಕಪ್‌ಜೀರಿಗೆ, ¾ ಕಪ್ ದಾಲ್ಚಿನ್ನಿ, 1 ಕಪ್ ಶಾಜೀರಿಗೆ, 12 ಗ್ರಾಂ ನಾಗಕೇಸರಿ, 5 ಗ್ರಾಂ ಲವಂಗ, 10 ಗ್ರಾಂ ಚಕ್ರಮಗ್ಗಿ, 10 ಗ್ರಾಂ ಮರಾಠಿಮಗ್ಗಿ, 5ಗ್ರಾಂ ತ್ರಿಫಳ, 10 ಗ್ರಾಂ ಕಲ್ಹೂವು, 5 ಗ್ರಾಂ ಏಲಕ್ಕಿ, 10 ಗ್ರಾಂ ಕಮಲಾ ಪತ್ರೆ, 2 ಕಪ್ ಬೆಳ್ಳುಳ್ಳಿ, 10 ಗ್ರಾಂ ಮೆಂತೆ, 10 ಗ್ರಾಂ ಕರಿಮೆಣಿನ ಕಾಳು.

**ವಿಧಾನ :** ಈರುಳ್ಳಿಯನ್ನು ಹೆಚ್ಚಿ 5 ತಾಸು ಕಾಲ ಬಿಸಿಲಿನಲ್ಲಿ ಒಣಗಿಸಿ. ಒಣಮೆಣಸಿನಕಾಯಿಯನ್ನು ಎಣ್ಣೆ ಹಚ್ಚಿ ಹುರಿಯಿರಿ. ಉಳಿದ ಜೀನಸುಗಳನ್ನು ಒಣಹುರಿಯಿರಿ. ಬೆಳ್ಳುಳ್ಳಿ, ಈರುಳ್ಳಿ, ಕರಿಬೇವು ಮತ್ತು ಕೊತ್ತಂಬರಿ ಸೊಪ್ಪು ಇವುಗಳನ್ನು ಕಂದು ಬಣ್ಣಕ್ಕೆ ಬರುವಂತೆ ಹುರಿಯಿರಿ.

## ಸಾಂಬಾರ್ ಪುಡಿ ನಂ. 1

**ಬೇಕಾಗುವ ಸಾಮಾನು :** 2 ಕಪ್ ಕೊತ್ತಂಬರಿ ಬೀಜ. 250 ಗ್ರಾಂ ಕಡ್ಲೆಬೇಳೆ, 200 ಗ್ರಾಂ ಒಣ ಮೆಣಸಿನಕಾಯಿ, 225 ಗ್ರಾಂ ಉದ್ದಿನಬೇಳೆ, 2 ಹಿಡಿ ಜೀರಿಗೆ, 5 ಅರಿಸಿನ ತುಂಡು, 1 ಹಿಡಿ ಮೆಂತೆ, 1 ಹಿಡಿ ಸಾಸಿವೆ, 1 ಹಿಡಿ ಕರಿಮೆಣಸಿನಕಾಳು, 250 ಗ್ರಾಂ ತೊಗರಿಬೇಳೆ, 3-4 ದಾಲ್ಚಿನ್ನಿ ತುಂಡು (ಬೇಕಿದ್ದರೆ), 1 ಸಣ್ಣಪಾಕೆಟು ಇಂಗು, 2 ಊ.ಚ. ಎಣ್ಣೆ.

**ವಿಧಾನ :** ಇಂಗನ್ನು ಸ್ವಲ್ಪ ಎಣ್ಣೆಯಲ್ಲಿ ಅರಳಿಸಿ, ಉಳಿದ ಎಣ್ಣೆಯಲ್ಲಿ ಮೆಣಸಿನ ಕಾಯಿಯನ್ನು ಹುರಿದು ಇಟ್ಟುಕೊಳ್ಳಿ, ಮಿಕ್ಕೆಲ್ಲಾ ಜೀನಸುಗಳನ್ನು ಬೇರೆ ಬೇರೆಯಾಗಿ (ಎಣ್ಣೆ ಮುಟ್ಟಿಸದೆ) ಹುರಿಯಿರಿ, ಈ ಎಲ್ಲಾ ಜಿನಸುಗಳನ್ನು ಬೇರೆ ಬೇರೆ ಪುಡಿ ಮಾಡಿ. ಆಮೇಲೆ ಅವುಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಚೆನ್ನಾಗಿ ಬೆರಸಿ ಬಾಟಲಿಯಲ್ಲಿ ಹಾಕಿಟ್ಟುಕೊಳ್ಳಿ.

## ಸಾಂಬಾರ್ ಪುಡಿ ನಂ. 2

**ಬೇಕಾಗುವ ಸಾಮಾನು :** ¼ ಕಪ್ ಮೆಂತೆ, ¼ ಕಪ್ ಉದ್ದಿನ ಬೇಳೆ, 75 ಗ್ರಾಂ ಒಣ ಮೆಣಸಿನಕಾಯಿ, ¼ ಕಪ್ ಜೀರಿಗೆ, 1 ಕಪ್ ಕೊತ್ತಂಬರಿ ಬೀಜ, 2 ಕಡಲೆಯಷ್ಟು ಇಂಗು, ¼ ಕಪ್ ಎಣ್ಣೆ.

**ವಿಧಾನ :** ಒಣ ಮೆಣಸಿನಕಾಯಿಯನ್ನು ಸುವಾಸನೆ ಬರುವ ತನಕ ಸ್ವಲ್ಪ ಎಣ್ಣೆಯೊಂದಿಗೆ ಹುರಿಯಿರಿ, ಆಮೇಲೆ ಮೆಂತೆ, ಜೀರಿಗೆ, ಕೊತ್ತಂಬರಿ ಮತ್ತು ಉದ್ದಿನಬೇಳೆ ಇವುಗಳನ್ನು ಸ್ವಲ್ಪ ಎಣ್ಣೆಯೊಂದಿಗೆ ಹುರಿದು ಒಟ್ಟಿಗೆ ಸೇರಿಸಿ ಬೆರಸಿ, ಉದ್ದಿನ ಬೇಳೆ ಕಂದು ಬಣ್ಣಕ್ಕೆ ಬರುವ ತನಕ ಹುರಿಯಿರಿ ಅದಕ್ಕೆ ಮೇಲೆ ಹೇಳಿದ ಒಣ ಮೆಣಸಿನ ಕಾಯಿ, ಹುರಿದ ಸಾಂಬಾರ ಪುಡಿ, ಮತ್ತು ಇಂಗು ಸೇರಿಸಿ ಕುಟ್ಟಿ ಪುಡಿ ಮಾಡಿ ಭರಣಿಯಲ್ಲಿ ಹಾಕಿಟ್ಟುಕೊಳ್ಳಿ.

## ಸಾಂಬಾರ್ ಪುಡಿ ನಂ. 3.

**ಬೇಕಾಗುವ ಸಾಮಾನು :** ಸುಮಾರು 15 ಊ.ಚ.ಯ ಕೊತ್ತಂಬರಿ ಬೀಜ, 2 ಊ.ಚ. ಕಡಲೆಬೇಳೆ, ½ ಗಿಟಕು ಕೊಬ್ಬರಿ (ತುರಿದು) 1 ಊ.ಚ. ಉದ್ದಿನ ಬೇಳೆ, 2 ತುಂಡು ದಾಲ್ಚಿನ್ನಿ, 200 ಗ್ರಾಂ ಒಣ ಮೆಣಸಿನಕಾಯಿ, ½ ಊ.ಚ. ಮೆಂತೆ.

**ವಿಧಾನ :** ಎಲ್ಲಾ ಜಿನಸುಗಳನ್ನು ಕಂದು ಬಣ್ಣಕ್ಕೆ ಬರುವಂತೆ ಬೇರೆ ಬೇರೆ ಒಣ ಹುರಿಯಿರಿ. ಆಮೇಲೆ ಎಲ್ಲವನ್ನು ಒಟ್ಟಿಗೆ ಸೇರಿಸಿ ಕುಟ್ಟಿಪುಡಿಮಾಡಿ.

## ಸಾಂಬಾರ ಮಸಾಲೆ

**ಬೇಕಾಗುವ ಸಾಮಾನು :** ½ ಬಟ್ಟಲು ಕಡ್ಲೆಬೇಳೆ, 1 ಊ.ಚ. ಸಾಸಿವೆ, 1 ಕಪ್ ಕೊತ್ತಂಬರಿ ಬೀಜ, 1 ಊ.ಚ. ಕರಿಮೆಣಸಿನ ಕಾಳು, 5 ಗ್ರಾಂ ಹಿಂಗು, ½ ಕಪ್ ಉದ್ದಿನಬೇಳೆ, 4-5 ತುಂಡು ಅರಸಿನ, 1½ ಊ.ಚ. ಮೆಂತೆ, 1 ಊ.ಚ. ಜೀರಿಗೆ.

20ನೇ ಪುಟಕ್ಕೆ




✦ ಕೌಂಡಿನ್ಯ

ಧಾರವಾಹಿ **-24**

ಅಲ್ಲಿ ಮೂವರು ಕೂತಿದ್ದಾರೆ.

ಶ್ರೀಕಂಠ, ಪೂಜಾರಿ, ರೇವತಿ !

ಅದು ಮಾವಿನ ತೋಪು !

ರೇವತಿ ಪೂಜಾರಿಯನ್ನು ನೋಡುತ್ತಾ "ಈಗ ನಡೆದಿರುವ ಘಟನೆಗಳ ಬಗ್ಗೆ ನಿಮಗೆ ಏನು ಅನಿಸುತ್ತದೆ?"

ಪೂಜಾರಿ "ಎಡತೂರೆಯ ಮನೆತನದ ಎರಡು ತಲೆಗಳು ನಿಗೂಢ ರೀತಿಯಲ್ಲಿ ಇಲ್ಲವಾಗಿದೊ. ಅಂದರೆ ನಾಗರ ನಂಜು ಈ ಮನೆತನಕ್ಕೆ ಎರಗಿರಬೇಕು."

ರೇವತಿ ಮುಖ ಸಿಂಡರಿಸಿದಳು.

ಶ್ರೀಕಂಠ "ನೋ.... ನೋ..... ನನಗೆ ಇದರಲ್ಲಿ ನಂಬಿಕೆ ಇಲ್ಲ. ಎಡತೊರೆ ಮನೆತನದವರು ದಾರಿಯಲ್ಲಿ ದಿಢೀರ್ ಅಂತ ಶ್ರೀಮಂತರಾಗಿದ್ದಾರೆ. ಸಂಪಾದಿಸಿರುವ ಶ್ರೀಮಂತಿಕೆಯನ್ನು ಅಪಹರಿಸಲು.... ಯಾರೋ ಒಬ್ಬರೇ ಅನುಭವಿಸಲು ನಾಟಕ ಆಡುತ್ತಿದ್ದಾರೆ. ಪರೋಕ್ಷವಾಗಿ ಕೊಲೆಗಳನ್ನು ಮಾಡುತ್ತಿದ್ದಾರೆ ಅನ್ನಿಸುತ್ತದೆ. ನನ್ನ ಊಹೆ ಸರಿಯಾಗಿದ್ದರೆ ಆ ಮನೆತನದಲ್ಲಿ ಇನ್ನೂ ಎರಡು ಕೊಲೆಗಳಾಗುತ್ತವೆ?"

ರೇವತಿ "ಶ್ರೀಕಂಠ..... ನೀನು ಮುಖ್ಯವಾದುದನ್ನೇ ಮರೆತ್ತಿದ್ದೀಯ, ಯಾವುದು ಗೊತ್ತೆ?"

ಶ್ರೀಕಂಠ ಹುಬ್ಬೇರಿಸಿದನು.

"ನಿನ್ನ ಅಕ್ಕನ ಸಾವು"

ಶ್ರೀಕಂಠ ಬೆಚ್ಚಿ ಬಿದ್ದನು.

ರೇವತಿ "ನಿನ್ನ ಅಕ್ಕ ಸಹ ಹುತ್ತದ ಹತ್ತಿರ ಇದೇ ರೀತಿ ಸತ್ತಿದ್ದಳು. ಅವಳಿಗೂ ಎಡತೊರೆ ಮನೆತನಕ್ಕೂ ಸಂಬಂಧವೇ ಇಲ್ಲ. ಆದರೆ ಈ ಎಲ್ಲಾ ಸಾವುಗಳಿಗೂ ಸಹ ಒಬ್ಬರೇ ಕಾರಣ ಅಂತ ನನ್ನ ಅಭಿಪ್ರಾಯ"

ಪೂಜಾರಿ ತಲೆಯಾಡಿಸುತ್ತಾ "ಹೌದು ರೇವತಿ ನನಗೆ ಅನಿಸುತ್ತೆ ಮೀನಳ ಸಾವು ತೀರಾ ಆಕಸ್ಮಿಕ ಅಂತ."

"ಅಂದರೆ...... ಅಂದರೆ....."

"ಮೀನ ಯಾವ ರೀತಿಯಲ್ಲೂ ಎಡತೊರೆ ಮನೆಯವರಿಗೆ ಸಂಬಂಧ ಪಡುವುದಿಲ್ಲ. ಉದ್ದೇಶವೇ ಇಲ್ಲದೆ ತೀರಾ ಅನಿರೀಕ್ಷಿತ ರೀತಿಯಲ್ಲಿ ಮೀನಳಿಗೆ ಈ ರೀತಿ ಸಾವು ಸಂಭವಿಸಿರಬಹುದು ಅಂತ ನನ್ನ ಅಭಿಪ್ರಾಯ ರೇವತಿ."

ಶ್ರೀಕಂಠ ಬೆಚ್ಚಿ ಬಿದ್ದನು.

ರೇವತಿ "ನನಗೆ ಅರ್ಥವಾಗುತ್ತಿಲ್ಲ. ಮೀನಳ ಸಾವು ಸಹ ಬುದ್ಧಿವಂತಿಕೆಯಿಂದ ಮಾಡಿರೋ ಕೊಲೆ ! ಈ ಎಲ್ಲಾ ಕೊಲೆಗಳ ಹಿಂದೆ ಇರೋ ವ್ಯಕ್ತಿ ಒಬ್ಬನೆ ! ಅಂದ ಮೇಲೆ ಮೀನಳ ಸಾವು ಮಾತ್ರ ಹೇಗೆ ಅನಿರೀಕ್ಷಿತವಾಗಿ ಉಂಟಾಗಲು ಸಾಧ್ಯ?" ಎಂದು ತೀಕ್ಷ್ಣವಾಗಿ ಕೇಳಿದಳು"

ಪೂಜಾರಿ "ಇದು ನನ್ನ ಊಹೆ. ಇದೇ ರೀತಿ ನಡೆದಿದೆ ಅಂತ ನಾನು ಹೇಳುತ್ತಿಲ್ಲ. ಎಡತೊರೆ ವ್ಯಕ್ತಿಗಳೊಂದಿಗೆ ಮೀನ ಸಹ ಸತ್ತಿದ್ದಾಳೆ. ಆದರೆ ಅದಕ್ಕೆ ಬಲವಾದ ಕಾರಣ, ಉದ್ದೇಶ ಇಲ್ಲ. ಆದ್ದರಿಂದ ಅವಳ ಸಾವು ಅನಿರೀಕ್ಷಿತ ರೀತಿಯಲ್ಲಿ ಉಂಟಾಗಿರಬಹುದು ಅನ್ನಿಸುತ್ತದೆ."

ರೇವತಿ ತಲೆಯಾಡಿಸುತ್ತಾ "ನೀವು ಹೇಳುವುದು ಸಹ ಒಂದು ರೀತಿಯಲ್ಲಿ ಸರಿಯಾಗಿಯೇ ಇದೆ. ಹಾವುಗಳ ವರ್ತನೆಯ ಬಗ್ಗೆ ನನಗೆ ಸಂದೇಹ ಬರುತ್ತದೆ !"

ಶ್ರೀಕಂಠ "ನನಗೂ ಸಹ ಅದೇ ಸಂದೇಹ"

ಪೂಜಾರಿ ಹುಬ್ಬೇರಿಸಿದನು.

ರೇವತಿ "ಅರುಂಧತಿಯ ದೇಹಕ್ಕೆ ಸುತ್ತಿಕೊಂಡಿದ್ದ ಹಾವುಗಳ ಚಲನೆಯಲ್ಲಿ ಚುರುಕುತನ ಇರಲಿಲ್ಲ. ಯಾವುದೋ ಆಕರ್ಷಣೆಗೆ, ಮೋಡಿಗೆ ಒಳಗಾದಂತೆ ಮಂದಗತಿಯಿಂದ ಹರಿಯುತ್ತಿತ್ತು ! ಕೆಲವು ಹಾವುಗಳಂತೂ ಅವಳ ದೇಹದ ಮೇಲೆ ಅಲ್ಲಾಡದೆ ಬಿದ್ದುಕೊಂಡಿದ್ದವು. ನನಗೆ..... ಇಲ್ಲಿ ಏನೋ ಅಸಹಜತೆ ಇದೆ ಅನ್ನಿಸುತ್ತದೆ."

ಶ್ರೀಕಂಠ ಅವಳನ್ನು ಮೆಚ್ಚುಗೆಯಿಂದ ನೋಡಿದನು. ಈ ವಿಚಾರ ಅವನಿಗೆ ಹೊಳೆದಿರಲಿಲ್ಲ !

ಪೂಜಾರಿ "ನನಗೆ ಅನಿಸುತ್ತೆ ಎಡತೊರೆ ಮನೆತನದ ಸಹೋದರರ ಮೇಲೆ ಕಣ್ಣಿಟ್ಟರೆ ಏನಾದರೂ ಸುಳಿವು ಸಿಗಬಹುದು ಅಂತ !"

ರೇವತಿ ತಲೆಯಾಡಿಸಿದಳು. ಅವಳು "ನೀವು ನನಗೆ ಇನ್ನು ಮುಂದೆ ಸಹಾಯ ಮಾಡಬೇಕು" ಅವರಿಬ್ಬರು ತಲೆಯಾಡಿಸಿದರು.

* * *

ರಾತ್ರಿ ಒಂಭತ್ತು ಗಂಟೆಯ ಸಮಯ !

ರೇವತಿ ಊಟ ಮಾಡಿ ಗೆಳತಿ ಮೀನಳ ಕೊಠಡಿಯಲ್ಲಿ ಮಲಗಿ ಕೊಂಡಿದ್ದಳು. ಅಂದೇಕೋ ಬೇಗ ನಿದ್ರೆ ಬಂದಿತ್ತು !

ಹಿತ್ತಲಿನ ಬಾಗಿಲಿನ ಹತ್ತಿರ ಶಬ್ದ !

ಬಾಗಿಲು ತೆರೆದು ಕೊಂಡಿತು.

ಮನೆಯಲ್ಲಿ ಸಣ್ಣ ಸೀಮೆಣ್ಣೆ ಲ್ಯಾಂಪ್ ಉರಿಯುತ್ತಿತ್ತು. ಹಾಲ್‌ನಲ್ಲಿ ಉಳಿದವರು ಮಲಗಿದ್ದಾರೆ.

ವ್ಯಕ್ತಿಯೊಂದು ಒಳಗೆ ಬಂದಿತು !

ದೇಹದ ತುಂಬಾ ಕಂಬಳಿಯನ್ನು ಸುತ್ತಿಕೊಂಡಿದೆ. ಮುಖ ಮುಚ್ಚಿ ಕೊಂಡಿದೆ! ಗುರುತಿಸಲು ಸಾಧ್ಯವೇ ಇಲ್ಲ !

ಆ ವ್ಯಕ್ತಿ ರೂಮಿನ ಹತ್ತಿರ ಬಂದಿತು !

ಬಾಗಿಲನ್ನು ನೂಕಿತು.

**20ನೇ ಪುಟಕ್ಕೆ**

ಇಲ್ಲಿಯವರೆಗೆ.........

ಆರುಂಧತಿಯ ಶವ ಸಂಸ್ಕಾರ ಮುಗಿಯುತ್ತದೆ. ಪ್ರಸನ್ನ ಅವಳ ರೂಮಿಗೆ ಬಂದು ಅಲ್ಲಿದ್ದ ಡೈರಿಯನ್ನು ಓದುತ್ತಾನೆ. ಅರುಂಧತಿಗೆ ತಮ್ಮನನ್ನು ಕೊಲೆ ಮಾಡುವ ಉದ್ದೇಶ ಮತ್ತು ಆಸೆ ಇದ್ದರೂ ಸಹ ಕಾರ್ಯಗತ ಮಾಡಿರುವುದಿಲ್ಲ ಎಂಬ ಸಂಗತಿ ಡೈರಿಯಿಂದ ತಿಳಿಯುತ್ತದೆ.

ಮುಂದೆ ಓದಿ.........

# ಹೈ ಬಿ.ಪಿ. ಅಯ್ಯಣ್ಣನೂ ಲೋ ಬಿ.ಪಿ. ಲೋಕಯ್ಯನೂ

ಅಯ್ಯಣ್ಣ ಮನೆಲಿ ಇರುವ ಆಸಾಮಿ ಅಲ್ಲ. ಯಾಗ ನೋಡಿರೂ ಆ ಮನೆ ಜಂಬರ, ಈ ಮನೆ ಜಂಬರಂತ ತಿರ್ಗಾಡುವ ಪೈಕಿ. ಅವಂಗೆ ಕಾಗದ ಕೊಟ್ಟೇ ಕೊಡಕುಂತೇನೂ ಇಲ್ಲೆ. ಬಾಯಿ ಮಾತಾದರೂ ಸಾಕ್. ಅದರ್ಲೂ ಜಂಬರ ನಡ್ಸವು ಹೇಳಕುಂತನೂ ಇಲ್ಲೆ. ಅವರಿವರ ಬಾಯಿಂದ ಕೇಳಿರೂ ಸಾಕ್. ಅಂವ ಅಲ್ಲಿ ಹಾಜರ್. ತಿಥಿ ಮನೇನೇ ಆಗಲಿ, ತೊಟ್ಲಿಗೆ ಹಾಕುದೇ ಇರ್ಲಿ, ಮದುವೆ ಮನೆ, ಕೋಲ, ಹರಿಸೇವೆ..... ಹಿಂಗೆ ಯಾವ್ದಾದ್ರೂ ಸರಿ, ಅಯ್ಯಣ್ಣ ಅಲ್ಲಿ ಇಲ್ಲದಿದ್ದರೆ ಆ ಜಂಬರ ಜಂಬರನೇ ಅಲ್ಲ. ಅಂವ ಹೋದ ಮನೆಲಿ ಮೂರ್‌ಕಾಸ್‌ನ ಕೆಲ್ಸನೂ ಮಾಡಿಕಿಲ್ಲೆ. ಸಮಾಕುಡಿಯೊದು, ಸಮಾ ಜಡಿಯೊದು, ಸಮಾಕುಣಿಯೊದು. ಅಂವನ ಕುಣ್ತಕ್ಕೂ ವಾದ್ಯಕ್ಕೂ ಸಂಬಂಧನೇ ಇಲ್ಲೆ.

ಒಮ್ಮೆ ಒಂದ್ ಮದುವೆ ಮನೆಲಿ ಸುಮಾರ್ ಜನ ಸೇರಿಕಂಡ್ ಕುಣಿತಾ ಇದ್ರೊ. ಅವರೊಟ್ಟಿಗೆ ಈ ಅಯ್ಯಣ್ಣನೂ ಸೇರಿ ಕುಣಿತಾ ಇತ್. ಸರಿ, ವಾದ್ಯದವು ಬಡಿವಷ್ಟ್ ಬಡ್ರೊ, ಊದುವಷ್ಟ್ ಊದಿದೊ. ಜನ ಕುಣಿವಷ್ಟ್ ಕುಣ್ದೊ. ವಾದ್ಯ ನಿತ್ತತ್. ಆದ್ರೆ ನಮ್ಮ ಅಯ್ಯಣ್ಣ ಮಾತ್ರ ಕುಣಿತಲೇ ಇತ್. ಅಷ್ಟೊತ್ತಿಗೆ ಮಳೆ ಹನಿ ಹಾಕಿಕೆ ಸುರು ಮಾಡ್ತ್. ಜೋರ್ ಜೋರೇ ಆಗಿ ಕಡೆಗೆ ಸೂರ್‌ಲಿ ನೀರ್ ಸುರಿವಷ್ಟ್ ಆತ್. ಜನ ಎಲ್ಲಾ ಸೂರ್ ಕೆಳಗೆ ಅಲ್ಲಿ ಇಲ್ಲಿ ಸೇರಿಕಂಡೊ. ಮಕ್ಕ ಮರಿ ಎಲ್ಲಾ ಅಂಗಳ ಅಟ್ಟ ಅಡಿಂತೇಳಿ ಓಡಾಡಿ ಮನೆನ ಕೊಟ್ಟೆಗೆಯಂಗೆ ಮಾಡಿ ಬುಟ್ರೊ. ಕೆಲವು ಮಕ್ಕ ಅಂತೂ ಹಾಸಿಗೆ ಮೇಲೆಲ್ಲಾ ಓಡಾಡಿ ಕೆಸ್ರ್ ರಂಪ ರಾಮಾಯಣ ಮಾಡ್ರೊ. ಅದೆಲ್ಲಾ ಇರ್ಲಿ, ನಮ್ಮ ಅಯ್ಯಣ್ಣನ ಕಥೆ ಕೇಳಿ. ಅಯ್ಯಣ್ಣಂಗೆ ಮಳೆ ಬರ್ತಾ ಇರುದಾಗಲಿ. ವಾದ್ಯ ನಿತ್‌ಟುತಾಗಲಿ ಯಾವುದರ ಗನ್ನನೇ ಇಲ್ಲೆ (ಗೋಚರನೇ ಇಲ್ಲೆ) ಅವನ ಹೊಟ್ಟೆ ಒಳಗಿದ್ದ "ಪರಮಾತ್ಮ" ಅವನ ಬುಟ್ ಹೋಗಿತ್ತೆ.

ಹಿಂಗೆ ಕುಣಿತಾ ಕುಣಿತಾ ಇರಕನ ಅವನ ಕುಣ್ತದ ಸ್ಟೈಲ್ ಬದಲಾಗಿ ಹೋತು ಹಾವು ಜಡೆ ಎತ್ತಿ ಆಡುವಂತೆ ಕೈನ ಮಾಡಿಕಂಡ್ ಸೊಂಟ ಬೊಗ್ಗಿಸಿಕಂಡ್ ಕುಣಿಕೆ ಸುರು ಮಾಡ್ತ್. ಹಂಗೆ ಕುಣಿತಾ ಇದ್ದಂವ ಈಗ ಕುದ್ ಕಂಡ್ ಹೆಡೆ(ಜಡೆ) ಆಡ್ಸಿಕೆ ಸುರು ಮಾಡ್ತ್. ಹಂಗೆ ಕುದ್ದಂವ ಕವುಚಿ ಮಲ್ಕಂಡ್ ಕೈ ಆಡ್ಸಿಕೆ ಸುರು ಮಾಡ್ತ್. ಕಡೆಗೆ ಹಾವುಗೆ ಸುಸ್ತಾಕನ ಬಿದ್‌ಕಂಡದಲ್ಲಾ ಹಂಗೆ ಬಿದ್‌ಕಂಡತ್. ಬಿದ್‌ಕಂಡಲ್ಲೇ ಒಳ್ಳೆ ನಿದ್ದೆನೂ ಮಾಡ್ತ್!

ಪಿರಿಯಕನ ಕೋಟ ಹತ್ತಿತ್. ಕೋಟ ಹತ್ತಕನ ನಿದ್ದೆನೂ ಬುಟ್ಟಿತ್. ಎದ್ ನೋಡಿರೆ ಕಥೆ ಬೇರೆ! ಮೈ ಪೂರಾ ಕೆಸ್‌ರ್ ಬಡ್ದ ಪಳ್ಳ ಬಿದ್ದ ಹಂದಿಯಂಗೆ ಆಗುಟು. ಚೀ ಚೀ ಕಂಡವ್ ಏನ್ ಹೇಳಿಕಿಲ್ಲೆ? ನಾಚಿಕೆ ಆದಂಗೆ ಆತ್ ರುಮ್ಮ ಮನೆಕಡೆ ಓಡ್ತ್. ಜಳಬಳಾ ಮೀದಂಗೆ ಮಾಡ್ತ್. ಬಟ್ಟೆನ ಬಚ್‌ಲ್‌ಲಿ ತುರ್‌ಕಿತ್. ಬೇರೆ ಬಟ್ಟೆ ಕೋಸಿಕಂಡ್ "ನಾಗೋಳಿ ಶಾಸ್ತ್ರ" ಆಗೋತೋ ಏನೋಂತ ಪುನ ಇತ್ತ ಓಡಿಬಾತ್. ನೀವ್ ಏನೇ ಹೇಳಿ ಅಯ್ಯಣ್ಣನ ಒಳ್ಳೆ ಬುದ್ದಿಂತೇಳಿರೆ ಯಾರೊಟ್ಟಿಗೂ ಜಗಳಕೆ ಹೋದಂವ ಅಲ್ಲ. ಸಾಧ್ಯ ಆದರೆ ಒಂದೆರಡ್ "ತಿಂಬೊದಲ್ಲದೆ" ತಿರ್ಗಿ ಹೊಡಕೆ ಹೋಕಿಲೆ. ಅಂತಾ ಪರಮ ಸಾಧು ಅಂವ.

ಒಮ್ಮೆ ಏನಾತೇ ತೇಳಿರೆ ಇಂವ ಒಂದ್ ಮದುವೆ ಜಂಬರಲಿ ಕುಣಿತಾ ಇರಕನ ಇಂವನ ಕೈ ಒಬ್ಬ "ಅರೆಪಿರಾಂದನ" ಕೆಮಿ ಚೆಂಡೆಗೆ ಬಡ್ದೋತು. ಆ ಅರೆಪಿರಾಂದ ತೆಗ್ದ ಮಡಿಗಿಕೆ ಅಯ್ಯಣ್ಣನ ಬಾಯಿ ಮೇಲೆ. ಆ ಪೆಟ್ಟ್‌ಗೆ ಅಯ್ಯಣ್ಣ ರಟ್ಟೆ ಬೀತ್. ಬಾಯಿಂದ ಬುಳ ಬುಳಾಂತ ರಕ್ತ ಸುರಿತಾ ಇತ್. ಹಿಂಗೆ ರಕ್ತ ಸುರಿತಾ ಇದ್ದರೂ ಬಿದ್ದಲ್ಲಿಗೆ ಬಂದ್‌ಕಂಡ್ ಹಾರಿ ಹಾರಿ ಮೆಟ್‌ತಾ ಉಟ್ಟು. ಅಷ್ಟೊತ್ತಿಗೆ ಜನ ಅವನ್ನ ತಬ್ಬಿ ಹಿಡ್ಕಂಡ್ ಎಳ್ಕಂಡೋಗಿ ಊಟ ಮಾಡಿ ಕೈ ತೊಳೆತಿದ್ದ ಇಳಿಜಾರ್ ಕಡೆ ತಳ್ಳಿದೊ. ಅಂವ ಜಾರಿಕಂಡೋಗಿ ಬಾಳೆಗುಂಡಿಗೆ ಬೀತ್. ಇಲ್ಲಿ ಅಯ್ಯಣ್ಣನ ಏಳ್ಸಿದೊ. ಬಾಯಿ ತೊಳೆಕೆ ನೀರ್ ಕೊಟ್ರೊ. ಬಾಯಿ ತೊಳ್ಕಾಕನ ನೋಡಿರೆ ಇಂವನ ಮುಂದೆದ್ ಎರಡ್ ಹಲ್ ನಾಪತ್ತೆ!! ಕಚ್ಚಿ ಕಚ್ಚಿ ಎಳೆತಿದ್ದ ಹಲ್ ಹೋದಮೇಲೆ ಅಯ್ಯಣ್ಣ ಜಂಬರಗಿಂಬರನ ದೂರ ಮಾಡ್ತ್.

ಈ ಅರೆಪಿರಾಂದನ ಹೆಸ್‌ರ್ ಲೋಕಯ್ಯಂತ. ಸುಖಾ ಸುಮ್ಮನೆ ಕಂಡ ಕಂಡವರ ಹಿಡ್ಕಂಡ್ ಹೊಡಿಯೋದು. ಅಂಗಡಿಗೆ ಹೋಗಿ ಬರುವ ಅಜ್ಜಂದರ ಬ್ಯಾಗ್‌ನೆಲ್ಲಾ ಕಿತ್ ಬಿಸಾಕುದು, ಹಿಂಗೆ ಅರೆ ಪಿರಾಂದಂತೇಳಿರೆ ಅರೆ ಪಿರಾಂದನೇ. ಹಿಂಗೆಲ್ಲಾ ಅಂವ ಇದ್ದರೂ ಯಾರೂ ಅಂವನ ನಡ ಮುರ್ತ್‌ಲೆ. ಅಂವನ ಬೀವು ಮೂಳೆ ಮುರಿಯೊಕು, ಅಂವನ ಪಡನೆಟ್ಟ್‌ಗೆ ಬುಡೊಕು ಅಂವನ ಕೈನ ತಿರ್‍ಚ್ಕೊಕು, ಕಂಬುಳಿ ಪೆರೇಡ್ ಮಾಡೊಕು, ಕಂಬುಳಿ ಪೆರೇಡಂತೇಳಿರಿ ತಲೆಗೆ ಕಂಬುಳಿನ ಮುಸುಕು ಹಾಕಿ ಸಮಾ ಬಡಿಯೊದು, ಅಲ್ಲಿಂದ ಓಡಿಬುಡ್ದು (ಇದ್ ಹೇಡಿಗಳ ಲಕ್ಷಣ) ಹಿಂಗೆಲ್ಲಾ ಮಾತಾಡ್ದಲ್ಲದೆ ಅಂವನ ಕಾಂಬಕನ ಯಾರೂ ತಿರ್ಗಿ ಮಾತಾಡಿಕಿಲ್ಲೆ. ಆದ್ರೆ ಹಲ್ ಮುರ್ಸಿ ಕಂಡ ಅಯ್ಯಣ್ಣ ಮಾತ್ರ ಬಾಕಿ ಇದ್ದ ಹಲ್‌ನ ಕಟಕಟಾಂತ ಸದ್ ಮಾಡ್ತಾ ಇನ್ ಇಂವ ಹಲ್ ಕಟ್‌ವ ವಿಚಾರ ಲೋಕಯ್ಯಂಗೆ ಗೊತ್ತಾಗಿ ಒಳಗೇ ತಕುಪುಕು ಸುರಾತ್ ಸಂತೆಗೆ ಹೋದ ದಿನ ಪಂಚಾಂಗ ನೋಡ್ಸಿತ್. ಕವುಡಿ ಬುಡ್ಸಿತ್ ತಾತಿ ಕಟ್ಟಿಸಿಕಂಡತ್. ರಾಶಿಫಲ ಹೇಳಂವ "ನಿನ್ನ ಮುಟ್ಟುವ ಗಂಡು ಇನ್ನೂ ಹುಟ್ಟಿತ್‌ಲೆಂತ" ಭವಿಷ್ಯ ಹೇಳ್ತ್. ಹಂಗೆ ಹೋಳಕನ ರಟ್ಟೆ ತಟ್ಟಿಕಂಡ್ ಲೋಕಯ್ಯ ಅಂಗ್ಡಿಗೆ ಹೋತು. ಪುಕ್ಸಟೆ ಸಿಕ್ಕಿದ ಬೀಡಿನ ಹೋಸಿತ್. ಎರಡೂ ಹೊಳ್ಳೆಂದ ಹೊಗೆ ಬುಡ್ತಾ ಇತ್. ಅಷ್ಟೊತ್ತಿಗೆ ಅಲ್ಲಿಗೆ ಅಯ್ಯಣ್ಣನೂ ಬಾತ್. ಅಂಗ್ಡೀಲಿ ನಾ ಕೈದ್ ಜನ ಬೇರೆ ಒಳೊ. ಹದಾಲಿ ಟೈಟ್ ಆಗಿದ್ದ ಅಯ್ಯಣ್ಣನ ಕಂಡದೇ ತಡ. ಯಾಗೋ ಏನೋ ಮೈ ಎಲ್ಲಾ ಸಡ್ಲ ಆದಂಗೆ ಆಗಿ ಗೊತ್ತಿಲ್ಲದೆ ಎಲ್ಲಾ ಅಲ್ಲೇ ಆಗುವಂಗೆ ಆಗೋತು. ರಾಶಿಫಲ ಬೇರೆ ಹಂಗೆ ಹೇಳಿಟು. ಈಗ ನೋಡಿಕೆ ಹಿಂಗೆ ಯಾಕೆ ಆಗ್ತಾ ಉಟ್ಟು? ಥೂ ನನ್ನ ಗ್ರಾಚಾರ ಇಂದ್ ಬುಟ್ಟದಯಾಂತ ಹಿಂಗೆಲ್ಲಾ ಗ್ಯಾನ ಮಾಡ್ತಾ ಇರಕನ ಕುಡುಕ ಕೋಳಿನ ಹಿಡಿದಂಗೆ ಹಾರಿ ಲೋಕಯ್ಯನ

20ನೇ ಪುಟಕ್ಕೆ

## ವ್ಯಕ್ತಿ ಪರಿಚಯ : ನಿರೀಕ್ಷೆಯ ಮೊದಲ ಮೆಟ್ಟಿಲಿನಲ್ಲಿ ಈ ನಮ್ಮ ಬಾಲೆ



ನಿದ್ರೆಯಿಂದ ಎಚ್ಚೆತ್ತ ನಮ್ಮ ಜನಾಂಗ ಈಗ ಒಂದಲ್ಲ ಒಂದು ರೀತಿಯಲ್ಲಿ ಪ್ರಚಾರದಲ್ಲಿ ಇರುವುದಲ್ಲದೆ ತನ್ನತನವನ್ನು ಸಮಾಜಕ್ಕೆ ತೋರಿಸಿ ಕೊಡಲು ಸನ್ನದ್ಧವಾಗಿದೆ. ಈ ಒಂದು ಸಂದರ್ಭದಲ್ಲಿ ನಮ್ಮ ಈ ಬಾಲೆಯನ್ನು ಜನಾಂಗಕ್ಕೆ ಪರಿಚಯಿಸಲು ಸಂತೋಷವೆನಿಸುತ್ತದೆ. ಇವಳ ಹೆಸರು ಧರಣಿ. ಇವಳು ಕುಂಬಳದಾಳು ಗ್ರಾಮದ (ಕುಯ್ಯಂಗೇರಿ)ತಡಿಯಪ್ಪನ ಬಿದ್ದಪ್ಪನವರ ಮಕ್ಕಳಲ್ಲಿ ಕೊನೆಯ ಹಾಗೂ ಏಕೈಕ ಸುಪುತ್ರಿ. ಇವಳು ಈಗ ನಾಪೋಕ್ಲುವಿನಲ್ಲಿ ಸರಕಾರಿ ಪದವಿ ಪೂರ್ವ ಕಾಲೇಜಿನಲ್ಲಿ 10ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವಳು. ಚಿಕ್ಕಂದಿನಲ್ಲೆ ಆಟೋಟಗಳಲ್ಲಿ ಹೆಚ್ಚಿನ ಆಸಕ್ತಿಯಿದ್ದರು ಸರಿಯಾದ ಮಾರ್ಗದರ್ಶನದ ಹಾಗೂ ಪ್ರೋತ್ಸಾಹದ ಕೊರತೆಯಿಂದ ಕೊನೆಗೂ ತನ್ನ ಪ್ರತಿಭೆಯನ್ನು ಹೊರಸೂಸಿ ತನ್ನ ಕೈಲಾದ ಪ್ರಯತ್ನದೊಂದಿಗೆ, ನಮ್ಮ ಅರೆಭಾಷಿಕ ಜನಾಂಗದಲ್ಲಿ ನಾನು ಒಬ್ಬಳು ಎಂದು ಪ್ರಾರಂಭದಲ್ಲಿಯೇ ಸಾಬೀತು ಪಡಿಸಿರುವಳು. ಈಗ್ಗೆ ಒಂದು ವರ್ಷದ ಈಚೆಗೆ ಇವಳ ಸಾಧನೆಯನ್ನು ಮೆಲುಕು ಹಾಕೋಣ.

1999-2000ದಲ್ಲಿ ಕೊಡಗು ಜಿಲ್ಲೆಯ ಅಂತರ ಶಾಲಾ ವಲಯ ಮಟ್ಟದ ಕ್ರೀಡಾ ಕೂಟದಲ್ಲಿ ಪಾಲ್ಗೊಂಡದಲ್ಲದೆ, ಜಾವಲಿನ್ ಎಸೆತದಲ್ಲಿ, 100 × 4ಮೀ ರಿಲೆ ಓಟದಲ್ಲಿ, 3,000 ಮೀ. ಓಟದಲ್ಲಿ ಪ್ರಥಮ ಸ್ಥಾನವನ್ನು, ಭಾರದ ಗುಂಡು ಎಸೆತದಲ್ಲಿ ಮತ್ತು ಕಬಡ್ಡಿಯಲ್ಲಿ ದ್ವಿತೀಯ ಸ್ಥಾನವನ್ನು, ಡಿಸ್ಕಸ್ ಎಸೆತ, ದೂರ ಜಿಗಿತದಲ್ಲಿ ತೃತೀಯ ಸ್ಥಾನವನ್ನು ಹಾಗೂ ಹಲವಾರು ಪ್ರಶಸ್ತಿ ಪತ್ರಗಳನ್ನು ಪಡೆದು ನಮ್ಮ ಜನಾಂಗಕ್ಕೆ ಕೀರ್ತಿ ತಂದಿರುತ್ತಾಳೆ.

ಇದರ ಬೆನ್ನ ಹಿಂದೆಯೇ ತಾಲೋಕು ಮಟ್ಟದ ಪ್ರೌಢ ಶಾಲಾ ಕ್ರೀಡಾಕೂಟ ಮರಗೋಡುವಿನಲ್ಲಿ ನಡೆದ ಸ್ಪರ್ಧೆಗಳಲ್ಲಿ ಭಾಗವಹಿಸಿ ಈ ಕೆಳಕಂಡ ಪ್ರಶಸ್ತಿಯನ್ನು ತನ್ನದಾಗಿಸಿಕೊಂಡಿದ್ದಾಳೆ. ಜಾವೆಲಿನ್ ಎಸೆತದಲ್ಲಿ ದ್ವಿತೀಯ ಸ್ಥಾನವನ್ನು 3,000 ಮೀ ಓಟದಲ್ಲಿ ಮತ್ತು 100 × 4 ಮೀ. ರಿಲೆಯಲ್ಲಿ ತೃತೀಯ ಸ್ಥಾನವನ್ನು ಪಡೆದಿದ್ದಾಳೆ. ತದನಂತರ 1999-2000 ಜಿಲ್ಲಾಮಟ್ಟದ ಕ್ರೀಡಾಕೂಟದ ಸ್ಪರ್ಧೆಯಲ್ಲಿ ಜಾವಲಿನ್ ಎಸೆತದಲ್ಲಿ ಪ್ರಥಮ ಸ್ಥಾನವನ್ನು ಪಡೆದಿರುತ್ತಾಳೆ.

ಈ ಸ್ಪರ್ಧೆಗಳು ಮುಗಿಯುತ್ತಿದ್ದಂತೆಯೇ ರಾಜ್ಯಮಟ್ಟದ ಕ್ರೀಡಾಕೂಟ ಚಿತ್ರದುರ್ಗದಲ್ಲಿ ನಡೆಯಿತು. ಇಲ್ಲಿ ನಡೆದ ರಾಜ್ಯ ಮಟ್ಟದ ಆಟೋಟಗಳ ಸ್ಪರ್ಧೆಯ ಜಾವಲಿನ್ ಎಸೆತದಲ್ಲಿ ನಾಲ್ಕನೇ ಸ್ಥಾನ ಪಡೆದ ಧೀರೆ.

ಈ ರೀತಿಯಾಗಿ ಮೊದಲ ಪ್ರಯೋಗದಲ್ಲಿಯೇ ಯಶ ಕಂಡ ಈ ನಮ್ಮ ಧರಣಿ ಮುಂದೆಯೂ ಮನೆತನಕ್ಕೆ, ಜನಾಂಗಕ್ಕೆ ಹಾಗೂ ಜಿಲ್ಲೆಗೆ ಕೀರ್ತಿ ತರುವಂತಾಗಲಿ, ಅಲ್ಲದೆ ಕುಲದೇವರು ಆಯುರಾರೋಗ್ಯ, ಭಾಗ್ಯ ಕೊಟ್ಟು ಮುಂದಿನ ಇವಳ ಯಶಸ್ಸಿಗೆ ದಾರಿ ದೀಪವಾಗಿರಲಿ ಎಂದು ಕೊಡಗು ಸಂಗಾತಿ ಹಾರೈಸುತ್ತದೆ.

**ತಡಿಯಪ್ಪನ ಕುಮಾರ ಜಯ, ಮೈಸೂರು**

---

## "ಇವರಾಡುವ ಮಾತು ಸತ್ಯವೆ?"

| | | |
|---|---|---|
| ಪತ್ನಿ | : | ಪಕ್ಕದ ಮನೆಗೆ ಹೋಗಿ ಐದು ನಿಮಿಷದಲ್ಲಿ ಬರುತ್ತೇನೆ |
| ಪತಿ | : | ಆಫೀಸಿನಲ್ಲಿ ಕೆಲಸವಿತ್ತು ಅದಕ್ಕೆ ಹೊತ್ತಾಯಿತು |
| ಶಿಕ್ಷಕ | : | ಮಕ್ಕಳೇ ನಿಮ್ಮ ಭವಿಷ್ಯ ನಿಮ್ಮ ಕೈಲಿದೆ |
| ವಿದ್ಯಾರ್ಥಿ | : | ಚೆನ್ನಾಗಿಯೇ ಓದಿದ್ದೆ ಹೇಗೆ ಫೇಲಾಯಿತೋ? |
| ಯಜಮಾನ | : | ಬನ್ನಿ ಬನ್ನಿ ನಿಮ್ಮನ್ನು ನೋಡಿ ತುಂಬಾ ಸಂತೋಷವಾಯಿತು |
| ಅತಿಥಿ | : | ಬೇಡ ಬೇಡ ಈಗ ತಾನೇ ಕಾಫಿ ಕುಡಿದು ಬಂದೆ |
| ಮಂತ್ರಿ | : | ನಿಮ್ಮ ಸುಖವೇ ನನ್ನ ಸುಖ |
| ಡಾಕ್ಟರ್ | : | ಹೆದರುವ ಕಾರಣವಿಲ್ಲ ಎಲ್ಲ ಸರಿಯಾಗುತ್ತೆ |
| ಜೋತಿಷ್ಯ | : | ಈ ತಿಂಗಳು ನಿಮಗೆ ಕೆಟ್ಟದಿದೆ ಮುಂದೆ ಒಳ್ಳೆಯದಾಗುತ್ತೆ |
| ಡ್ರೈವರ್ | : | ಇನ್ನು ಐದೇ ನಿಮಿಷದಲ್ಲಿ ಬಸ್ ಹೊರಡುತ್ತದೆ |
| ಕಂಡಕ್ಟರ್ | : | ಚಿಲ್ಲರೆ ಇಲ್ಲ ಆಮೇಲೆ ಕೊಡುತ್ತೇನೆ |
| ದರ್ಜಿ | : | ಸೋಮವಾರ ಬನ್ನಿ ನಿಮ್ಮ ಬಟ್ಟೆ ಖಂಡಿತ ಹೊಲಿದಿರುತ್ತೇನೆ |
| ಭಿಕ್ಷುಕ | : | ಅಮ್ಮ ಊಟ ಮಾಡಿ ಎರಡು ದಿನ ಆಯಿತು |
| ಲೇಖಕ | : | ಬರೆಯಲು ಸಮಯವೇ ಸಿಗುವುದಿಲ್ಲ |
| ತರಕಾರಿಯವನು | : | ಸಾರು ಮಾಡಿ ನೋಡಿ ಚೆನ್ನಾಗಿದ್ದರೆ ಹಣ ಕೊಡಿ. |

**ಕೋಡಿ ಅನಿತಾ ಮಾಚಯ್ಯ, ಗುಡ್ಡೆ ಹೊಸೂರು**

ಉಪ್ಪು ತಿಂದವನು ನೀರು ಕುಡಿಯಲೇ ಬೇಕು

# ಹನ್ಕ್‌ಲ್ ಅತ್ತೆ ಬಾತಲೆ !......

ಕಾಲೇಜ್‌ಂದ ಬಂದ್ ಊಟ ಮಾಡಿ ಕುದ್ದುಕೊಂಡಿದ್ದೆ. ಮಳೆಗಾಲ ಅಲ್ಲ?.... ಬೇಜಾರ್ ಕಳಿಯಕೆ ಏನಾರೂ ಬೇಕಲೆ. ಅಮ್ಮಮ್ಮಾ ಒಂದ್ ಕತೆ ಹೇಳಮ್ಮಾಂತ ಅಮ್ಮನ ಮಂಜಣೆ ಮಾಡ್ದೆ. ಯಾಕೋ ಏನೋ ಅಮ್ಮನೂ ಒಳ್ಳ ಮೂಡ್‌ಲಿ ಇದ್ದಂಗೆ ಕಂಡ್‌ತ್. ಯಾವ ಕತೆ ಹೇಳೊಕು? ಅಜ್ಜಿ ಕತೆನಾ ಅಲ್ಲ.... ನಡ್ದ ಕತೆನಾಂತ ಕೇಳ್ತ್. ನಡ್ದ ಕತೆನೇ ಹೇಳೂತೇಳಿ ಕೆಮಿ ಅಗಲ ಮಾಡಿ ಕುದ್ದೆ.

"ಸುಮಾರ್ ನಲ್ವತ್ ವರ್ಷದ ಹಿಂದೆನ ಕತೆ" ಅಮ್ಮ ಹೇಳಿಕೆ ಶುರು ಮಾಡ್ತ್. "ನಂಗೆಆಗ ಎಂಟ್ಹತ್ತ್ ವರ್ಷ ಇದ್ದಿರ್ದು. ಇಂತದೇ ಒಂದ್ ದಿನ.... ಹಿಂಗೇ ಮಳೆ ಬಾತಿತ್. ಮಳೆಗಾಲದ ರಜೆನೂ ಬ್ಯಾರೆ ಸಿಕ್ಕಿತ್. ಮನೆಲಿ ಕುದ್ದ್‌ಕಂಡ್ ಎಂತ ಮಾಡ್ದೂಂತೇಳಿ ಮಾನ್ ಮನೆಗೆ ಹೋಕೆ ನೆನ್ಪ್ ಆಗುಟೂಂತೇಳಿ ನನ್ನ ಮಾನ್ ಮನೆಗೆ ಕಳ್ಸಿದೊ. ನನ್ನ ಅದೃಷ್ಟಕ್ಕೆ ಅಲ್ಲಿ ನಂದೇ ವಯ್ಸ್ನ ಅತ್ತಿಗೆ ಒಬ್ಬ ಇತ್ತ್, ನಾವು ಬೇಗ ಚೋಸ್ತಿ ಆದೊ. ಕೂರ್‌ಕನೆ ನಿಲ್ಕನೆ, ಉಂಬಕನೆ, ತಿಂಬಕನೆ, ಮಲ್ಗ್‌ಕನೆ..... ಹಿಂಗೆ ಎಷ್ಟೊತ್ತಿಗೂ ನಾವು ಒಟ್ಟಿಗೇ ಇರ್ತಿದ್ದೊ. ಆದರೆ ಇದ್ ತುಂಬಾ ಹೊತ್‌ಉಳ್ತ್‌ಲೆ. ರಾತ್ರಿ ಕಳ್ದ್ ಬೆಳ್ಗಾದಂಗೆ ಅವ್ವ ನನ್ನ ತಪ್ಪ್‌ಸಿಕಂಡ್ ತಪ್ಪ್‌ಸಿಕಂಡ್ ಓಡಾಡಿಕೆ ಶುರು ಮಾಡ್ತ್. ನಂಗ್ಯಾಕೋ ಡೌಟು ಬಾತ್. ನಾನ್ ಏನ್ ಕಡಿಮೆ!?.... ನಾನ್ ಅವ್ವ ಅಣ್ಗೆಕಂಡ್ ಅಣ್ಗೆಕಂಡ್ ಅಬ್ಸರ್ವ್ ಮಾಡಿಕೆ ಸುರು ಮಾಡ್ದೆ. ಅವ್ವ ಅತ್ತ ಇತ್ತ ನೋಡಿ ಅಡಿಗೆ ಮನೆಗೆ ನುಗ್ಗಿ ಒಂದ್ ಚೊಂಬು ತಕಂಡ್ ಹಿಂದೆನ ಬಾಗ್‌ಲ್‌ಗಾಗಿ ಹೊರಗೆ ಹೋತ್. ನಾನ್ ಮಂಡೆ (ಮೈಂಡ್)ಗೆ ಕೆಲ್ಸ ಕೊಟ್ಟೆ. ಅವ್ವ ಕೈಲಿದ್ದ ಚೊಂಬುನ ನೋಡಿಕಾಕನೆ ನಂಗೆ ಗೊತ್ತಾಗಿ ಹೋತ್. ಓ.... ಹೋ.... ಸಣ್ಣತ್ತೆ ಮನೆಗೆ ಮಜ್ಜಿಗೆ ತಾಕೆ ಹೊರ್ಟದಾ? ನಂಗೆ ಗೊತ್ತಾಕಿಲೆಂತ ಗ್ಯಾನ ಮಾಡ್ದನಾ?.... ಅತ್ತೆ ಕೊಡುವ ಹಾಲು, ಮೊಸ್ರು, ಬೆಣ್ಣೆ, ತುಪ್ಪನ ಒಬ್ಬನೇ ತಿನ್ನೊಕೂಂತೇಳಿ ನಿನ್ನ ಐಡಿಯನಾ?.... ನಾನು ಬನ್ನೆಂತ ಹೇಳಿ ಅವ್ವ ಹಿಂದಿನೇ ಸಣ್ಣತ್ತೆ ಮನೆಗೆ ಹೊರ್ಟೆ. ಅವ್ವ ಸಿಕ್ಕಿಬಿದ್ದ ಕಳ್ಳ ಕೊತ್ತಿನಂಗೆ ಆಗಿ ಹೋತ್" ಬರ್ಬಡಾಂತ ಹೇಳಿಕೆ ಆದೆನ??....

"ಅಂತೂ ಅತ್ತೆ ಮನೆಗೆ ಹೋದೊ. ಮುತ್ತು ಗೂಡೆನೂ ಬಂದುಟೂಂತ ಅತ್ತಿಗೆ ಅವ್ವ ಚಿಕ್ಕಮ್ಮನ್ಹತ್ರ ಹೇಳ್ತ್. ಅತ್ತೆಗೆ ಕಣ್ಣ್, ಕಿವಿ ಸ್ವಲ್ಪ ದೂರ. ಓ.... ಸೊಸೆ ಕೂಸಾ.... ಬಾನೇಂತ ರಾಗಲಿ ಮಂಜಣೆ ಮಾಡಿ ಒಳಗೆ ಕರ್ದ್ ಮನೆಲೆ ಎಲ್ಲಾ ಉಷಾರೊಳೂ ತಾನೆಂತ ಕೇಳ್ತ್. ನಾನ್ ಹ್ಹೂಂತೇಳ್ದೆ. ಅದ್ ಇದ್ ಮಾತಾಡಿ ಆದ ಮೇಲೆ ಚೊಂಬುನ ಅತ್ತೆಗೆ ಕೊಟ್ಟ್, ನಾವ್ ಮಂಜ್ಜಿಗೆಗೆ ಬಂದದ್‌ತ ಅತ್ತಿಗೆ ಹೇಳ್ತ್. ಓ.... ಹಾಗಾಂತೇಳಿ ಸಣ್ಣತ್ತೆ ಮಜ್ಜಿಗೆ ಹೊಯ್ಕಂಡ್ ಬಾತ್. ನಾವ್ ಮಜ್ಜಿಗೆ ತಗಂಡ್, ಬಂದವೇಂತ ಹೇಳಿ ಮನ್ಸ್ ಇಲ್ಲದ ಮನ್ಸ್‌ದ ಹೊರ್ಟೊ. ಅಷ್ಟೊತ್ತಿಗೆ ಸಣ್ಣತ್ತೆಗೆ ಏನನ್ಸಿತೋ ಏನೊ!... ನಿಲ್ಲಿನೆ ಮಕ್ಕಳೆ ಕುಂಡೆಲಿ ಹುಳ ಆದವರಂಗೆ ಮಾಡ್ರೆ ಅಲೆ. ಕಾಫಿ ಕುಡ್ದ್ ರೊಟ್ಟಿ ತಿಂದ್ ಹೋಕ್‌ತ್ ಹೇಳ್ತ್. ನಮ್ಗೆ ಒಳ್ಗೊಳಗೆ ಖುಷಿ ಆತ್. ನಾವ್ ಮತ್ತೆ ಮಣೆಲಿ ಕುದ್ದೊ. ಕಾಲಲಿ ರೊಟ್ಟಿ ಮಾಡ್ದು ಬಾರೀ ಅಪುರೂಪಲಿ, ಹಬ್ಬಗಳಲಿ ಮಾತ್ರ ಮಾಡ್ತಿದ್ದದ್... ಇಲ್ಲೆ...... ಮನೆಗೆ ನೆಂಟ್ರ್ ಬರೊಕು. ಅದರ ಹೊರ್ತು ಅಂಬ್‌ಲಿ ಮಾತ್ರ ಗತಿ. ಅದಂತೂ ಮಕ್ಕಳಿಗೆ ತಿಂದ್ ತಿಂದ್ ಬಿಡ್ದ್ ಹೋಗಿದ್ದದೆ. ಅದ್ಕನೇ ಮಕ್ಕ ತಿಂಗಳಿಗೊಮ್ಮೆ ಆದರೂ ನೆಂಟ್ರ್ ಬರ್ಲಿಂತ ದೇವರ ಹತ್ರ ಬೇಡಿಕೊಂಬತಿದ್ದ ಕಾಲ ಅದ್" ಬಹುಷ ನೆಂಟ್ರ್ ಮನೆಗೆ ಹೋಕೂಂತ ಮಕ್ಕ ಹಟ ಹಿಡಿಯತಿದ್ದದೂ ಅದೇ ಕಾರಣಕೆ ಇರೊಕು ! "ಅದ್ಕೇ ರೊಟ್ಟಿ ತಿಂದ್ ಹೋಕ್‌ತ ಸಣ್ಣತ್ತೆ ಹೇಳ್ಕನ ನಮ್ಗೆ ಸ್ವರ್ಗ ಸಿಕ್ಕಿದಂಗೆ ಆದ್. ಸಣ್ಣತ್ತೆ ನೆಲೂಂದ ಎರ್ಡ್ ಸಣ್ಣ ಸಣ್ಣ ರೊಟ್ಟಿಗಳ ತೆಗ್ದ್ ಕಣೆಲೆ ಗೈಪು ಚೂರು ಚೂರು ಹಾಕಿ ಒಂದೊಂದ್ ರೊಟ್ಟಿನ ನಮಿಗೆ ಕೊಟ್ಟತ್. ಇದ್ದದರ್ಲಿ ನಂಗೆ ಸೊಲ್ಪ ದೊಡ್ಡ ರೊಟ್ಟಿ ಸಿಕ್ಕಿತ್. ಎಷ್ಟಾದರೂ ನಾನ್ ನೆಂಟತಿ ಗೂಡೆ ಅಲ?!.... ನಾವ್ ಗಬಗಬ ತಿಂಬಕೆ ಶುರ್ ಮಾಡ್ಕನೆ ಅತ್ತೆ ಹೇಳ್ತ್, ನಿಲ್ಲಿನೆ ಮಕ್ಕಳೆ ತುಪ್ಪ ಹೊಯ್ದನೇಂತ, ನಮ್ಗೆ ಭಾರೀ ಖುಷಿ ಆತ್. ರೊಟ್ಟಿನೊಟ್ಟಿಗೆ ತುಪ್ಪನೂ ಸಿಕ್ಕಿದೆ ಅಲಾಂತೇಳಿ ನಾವ್ ನಿಧಾನಕೆ ಚೂರ್ ಚೂರೇ ತಿಂಬತಿದ್ದೊ. ಅತ್ತೆ ತಬ್ಬುರಿಸಿ ಕೊಂಡ್ ಹೋಗಿ ನೆಲೂಂದ ತುಪ್ಪದ ಗಿಂಡಿ ತೆಗ್ದ್ ತಾಮ್ರದ ಚಂಚಲಿ ಹನ್ಕ್‌ಸಿಕೆ ಶುರು ಮಾಡ್ದ್. ರೂಮ್‌ಗೆ ಬಾಗ್‌ಲ್ ಬುಟ್ರೆ ಬ್ಯಾರೆ ಕಿಡ್ಕೆ ಗಿಡ್ಕೆ ಏನೂ ಇಲ್ಲೆ. ಮಣ್ಣ್‌ನ ಗೋಡೆಲಿ ಹಿಡಿ ದಪ್ಪದ ಎರ್ಡ್ ತೂತ್ ಮಾತ್ರ ಇದ್ದದ್. ಹುಲ್ಲ್‌ನ ಮನೆ ಬ್ಯಾರೆ. ಅತ್ತೆಗೆ ಕಣ್ಣು ಬ್ಯಾರೆ ಕಾಂಬೊದಿಲೆ. ಹಂಗಾಗಿ ತುಪ್ಪ ರೊಟ್ಟಿಗೆ ಬೀತೇಲೆ. ಬೀತನೆ ಮಕ್ಕಳೆ.... ಬೀತನೇಂತ ಅತ್ತೆ ಕೇಳ್ತ್. ಬೀತ್‌ಲೇಂತ ಹೇಳಿಕೆ ಆದೆನ. ಹ್ಹೂಂ.... ಬೀತ್... ಬೀತ್‌ತ ನಾವ್ ಹೇಳ್ದೊ. ಇನ್ನ್ ಇಲ್ಲಿ ನಿತ್ತರೆ ಅಸ್‌ಲ್ ಆಕಿಲೇಂತೇಳಿ ಬೇಗ ಬೇಗ ರೊಟ್ಟಿ ತಿಂದ್ ಅತ್ತೆ ಕೊಟ್ಟ ಕೋಲ್ಡ್ ಕಾಫಿನ ಕಣ್ಣ್ ಮುಚ್ಚಿ, ನಾಲಿಗೆಗೆ ಸಿಕ್ಕದಂಗೆ, ದೊಂಡೆಗೆ ಹೊಯ್ಕಂಡ್, ಕೈನ ಲಂಗಕೆ ಒರ್ಸಿಕಂಡ್, ಮಜ್ಜಿಗೆ ತಕಂಡ್, ಬಂದವೇಂತೇಳಿ ಅಲ್ಲಿಂದ ಜಾಗ ಕಾಲಿ ಮಾಡ್ದೊ." ನಿಮ್ಗೆ ಹಂಗೇ ಆಕೂಂತ ಹೇಳಿಕೆ ನಾನ್ ಮರ್ತತ್‌ಲೆ.

"ಅಂತೂ ಮಜ್ಜಿಗೆ ತಗಂಡ್ ಬಂದೊ. ದೊಡ್ಡತ್ತೆ ಅಷ್ಟೊತ್ತಿಗೆ ನಮಿಗೆ ಕಾಫಿ - ತಿಂಡಿ ರೆಡಿ ಮಾಡಿ ಇಟ್ಟಿದ್ದೊ. ಕಾಫಿ ಕುಡಿಯತಿರ್ಕನೆ ದೊಡ್ಡತ್ತೆ ಕೇಳ್ದೊ ಸಣ್ಣತ್ತೆ ಎಂತ ಕೊಟ್ಟತ್‌ನೇಂತ. ನಾನ್ ಬಾಯಿ ಬುಡಿಕೆ ಮುಂದೆನೇ ಅತ್ತಿಗೆ ಹೇಳ್ತ್ ರೊಟ್ಟಿನೂ ಕಣೆಲೆಗೆ ಗೈಪೂಂತ.

ನಂಗೆ ಎಲ್ಲಿತ್ತೊ ಸಿಟ್ಟ್; ಮತ್ತೇ ಹನ್ಕ್‌ಲ್ ಅತ್ತೆ ಹನ್ಕ್‌ಸಿತ್ - ಹನ್ಕ್‌ಲ್ ಅತ್ತೆ ಹನ್ಕ್‌ಸಿತ್‌ತ ನಾನ್ ದುಂಡ್ ಹೊತ್ತ್‌ಕಂಡ್ ಹೇಳ್ದೆ. ಅತ್ತಿಗೆ ಏನು ಕಡಿಮೆ.... ಹೌದಮ್ಮಾ.... ಹನ್ಕ್‌ಲ್ ಅವ್ವ ಹನ್ಕ್‌ಸಿತ್.... ಹನ್ಕ್‌ಲ್ ಅವ್ವ ಹನ್ಕ್‌ಸಿತೂಂತ ಅವ್ವೂ ಹೇಳ್ತ್. ದೊಡ್ಡತ್ತೆಗೆ ನಮ್ಮ ಮಾತ್‌ನ ತಲೆ ಬುಡ ಅರ್ಥ ಆತ್‌ಲೆ. ಎಂತದ್ ಮಕ್ಕಳೇ ಹನ್ಕ್‌ಸಿದ್‌ತ ಅತ್ತೆ ಕೇಳಿಕಾಕನೆ ನಾವು ಮತ್ತೆ

ಇರುಳು ಕಂಡ ಬಾವಿಲಿ ಹಗಲು ಬಿದ್ದಂತೆ

ನಡ್ದ ಸಂಗತಿನ ಎಲ್ಲಾ ಹೇಳ್ದೊ. ಅತ್ತೆಗೆನೂ ನಗೆ ತಡಿಯಕೆ ಆತ್ಲೆ. ಒಂದು ಮಾದ್‌ರಿ ನೆಗಾಡಿ ಆದ ಮ್ಯಾಲೆ ಅತ್ತೆ ಹೇಳ್ದೊ, ಬೇಜಾರ್ ಮಾಡಿಕಣ್ಬಡಿ ಮಕ್ಕಳೆ, ನಾನ್ ನಾಳೆ ಒಂದ್ ಸೇರ್ ತುಪ್ಪ ತರ್‍ಸಿನೆ. ಬಿಡ್ಸ್ ಹೋಗುವಷ್ಟ್ ತಿನ್ನೀಂತ. ನಮ್‌ಗೂ ಅದೇ ಬೇಕಾಗಿದ್ದದ್. ಹಂಗಾಗಿ ನಮಿಗೆ ಭಾರೀ ಕುಷಿ ಆತ್. ಆದರೆ ಅತ್ತೆ ಅಲ್ಲಿಗೆ ನಿಲ್ಸೊಕಲೆ.... ಅದೆಲ್ಲ ಹೋಗಲಿ ತುಪ್ಪ ಬೀತ್ಲರೆ ಬೀತ್‌ಲೇಂತ ಹೇಳಕಾಗಿತ್. ಅದ್ ಬುಟ್ಟ್ ಸಣ್ಣತ್ತೆಗೆ ಹನ್ಕ್‌ಲ್ ಅತ್ತೇಂತ ಬ್ಯಾರೆ ಹೆಸ್‌ರ್ ಹಾಕೊಳ್ಯಾ.... ಕಲ್ಸಿನೆ ಮಕ್ಕಳೆ ನಿಮಿಗೆ ಅವ್ರು ಬರ್‍ಲೀಂತ ಅತ್ತೆ ಹೇಳಿಕಾಕನೆ ನಮಿಗೆ ಹೆದ್ರಿಕೆ ಆತ್. ಅತ್ತಿಗೆ ಕೇಳ್ತ್ ಅಮ್ಮಮ್ಮಾ ಮತ್ತೆ ಸಣ್ಣಪ್ಪ ಬಾಕಾಕನೆ ಎಲ್ಯಾರು ನಾವು ಹೇಳ್ದರ ಮಾತೆ ಹೇಳಿಬುಡುಬೇಡಾಂತ. ಅದ್ಕೆ ಅತ್ತೆ ಒಪ್ಪಿದೆನೋ... ಉಹ್ಞಂ.... ಅದೆಲ್ಲಾ ಆಕಿಲೆ ಮಕ್ಕಳೆ.... ಅವ್ರು ಮತ್ತೆ ವೀಳ್ಯದೆಲೆ ಹೆರ್‍ಕಿಕೆ ಬಾಕನೆ ನಾನ್ ಹೇಳಿಯೇ ಹೇಳ್ತೇಂತ" ನಾನಾದರೂ ಅದೇ ಮಾಡ್ತಿದ್ದೆ.

ತಿಂದದ್ ಅರ್‍ಗ್ಲೊಕಲೆ.... ನಾವು ಆಡಿಕೆ ಶುರು ಮಾಡ್ದೊ. ಸೊಲ್ಪ ಹೊತ್ತ್ ಆಗಿರ್‍ದಷ್ಟೆ. ಹನ್ಕ್‌ಲ್ ಅತ್ತೆ ಬಾತಲೇಂತ ಅತ್ತೆ ಹೇಳ್ದು ಕೇಳಿತ್. ನೋಡ್ರೆ.... ಸಣ್ಣತ್ತೆ ನಿಧಾನಕೆ ಮನೆ ಕಡೆಗೇ ಬಾತಿದ್ದೊ. ಕೈಲಿ ವೀಳ್ಯದೆಲೆ ಕೂಡಾ ಇತ್ತ್. ನಾವ್ ಕೈಯಾಲೆಲಿ ಆಡ್ತಾ ಇದ್ದವ್ ಒಳಗೆ ನುಗ್ಗಿ.... ಹಿಂದೆನ ಬಾಗ್‌ಲ್‌ಗಾಗಿ..... ಬಾಳೆ ತೋಟಕೆ ಓಡ್ದೊ. ನಮ್ಮ ಎದೆ ಡಬ ಡಬಾಂತ ಸವುಂಡ್ ಮಾಡ್ತಿತ್. ಆದರೂ ಅಲ್ಲಿಂದಲೇ ನಾವ್ ಅತ್ತೆನವ್ ಮಾತಡ್ದರ ಕಿವಿಗೊಟ್ಟು ಕೇಳಿಕೆ ಪ್ರಯತ್ನ ಪಟ್ಟೊ. ಅದ್ ಹೆಂಗೆ ಸಾಧ್ಯ?.... ನಮ್ಮ ಎದೆ ಬಡ್‌ತದ ಸವುಂಡೇ ಅವರ ಮಾತಿಗಿಂತ ಜೋರಾಗಿ ಕೇಳ್ಕನೆ ಅಂತೂ ಧೈರ್ಯ ಮಾಡಿ ಹಿಂದೆನ ಬಾಗ್‌ಲ್ ಹತ್ರ ಬಂದ್ ಕಿವಿಗೊಟ್ಟ್ ಆಲ್‌ಸಿಕೆ ಶುರು ಮಾಡ್ದೊ. ಅಷ್ಟೊತ್ತಿಗೆ ಸರಿಯಾಗಿ ಒಳಗೆ ದೊಡ್ಡತ್ತೆ ಹೇಳ್ದು ಕೇಳ್ಸಿತ್ ನೀನ್ ಮತ್ತೆ ಮಕ್ಕಳಿಗೆ ತುಪ್ಪ ಕೊಟ್ನೇಂತ ಆಸೆ ಹಿಡ್ಸಿ ಹನ್ಕ್‌ಸಿದಗಡಾ.... ಹನ್ಕ್‌ಸಿದ ತುಪ್ಪ ಬೀತೇಲೆಗಡ..... ಮಕ್ಕ ಹೇಳ್ತಿದ್ದೊ. ಹಂಗೆ ಮಾಡ್ದೋ.... ಅವು ಮತ್ತೆ ನಿನ್ನ ಹನ್ಕ್‌ಲ್ ಅತ್ತೇಂತ ಹೇಳಿಕಂಡ್ ನೆಗಾಡ್ತಿದ್ದೊೀಂತ. ನನ ಎದೆ ಚಂಡೆ ಬಾರ್‍ಸಿಕೆ ಶುರು ಮಾಡ್ದರ್‌ದಾಗಿ ಮತ್ತೆ ಹೇಳ್ದ. ಮಾತ್ ಕೇಳ್ಸಿತ್ಲೆ. ಸುಮಾರು ಹೊತ್ತಾದ ಮೇಲೆ ಸಣ್ಣತ್ತೆ ಹೇಳ್ದು ಕೇಳ್ಸಿತ್. ಇಲ್ಲೆನೇ, ನಾನ್ ತುಪ್ಪ ಹೊಯ್ದ್ಯಾಳೆನೇ. ಬೀತಾ ಬೀತಾಂತ ಕೂಡ ನಾನ್ ಕೇಳ್ದೆ. ಅವು ಬೀತ್‌ತ ಬ್ಯಾರೆ ಹೇಳ್ದೊ. ಈಗ ನಿನ್ನೊಟ್ಟಿಗೆ ಹನ್ಕ್‌ಲ್ ಅತ್ತೆ ಹನ್ಕ್‌ಸಿತೂಂತ ಚಾಡಿ ಬ್ಯಾರೆ ಹೇಳ್ದ್ಯೊಳೊನಾ? ಅದ್ಕೆ ಕಲ್ಸಿನೆ.... ನಾಳೆ ಮಜ್ಜಿಗೆಗೆ ಬಾವೊಂತ ಸಣ್ಣತ್ತೆ ಹೇಳಿಕಾಕನೆ ನಮ್ಮ ಹದ್ರಿಕೆ ಮತ್ತೂ ಜಾಸ್ತಿ ಆತ್. ಸಣ್ಣತ್ತೆ ಹೋಗುವವರೆಗೂ ನಾವು ಮನೆ ಕಡೆ ತಲೆ ಹಾಕಿತ್ಲೆ. ಮಾರನೇ ದಿನ ಮಜ್ಜಿಗೆಗೆ ಕೂಡಾ ಯಾರೂ ಹೋತ್ಲೆ. ಹಂಗೆ ತಿರ್‌ಗಿ ಮನೆಗೆ ಬರುವವರೆಗೂ ನಾನ್ ಸಣ್ಣತ್ತೆಗೆ ಕಾಂಬಕೆ ಸಿಗದಾಂಗೆ ಕಟ್ಟೆಚ್ಚರ ವಯ್ಸಿದ್ದೆ. ಮೊನ್ನೆ ಮೊನ್ನೆವರೆಗೂ, ಅತ್ತೆ ಬದ್ಕಿರುವವರೆಗೂ ಅವರಾ ಕಾಂಬಕಾಕನೆ ಎಲ್ಲ ನಂಗೆ ಹನ್ಕ್‌ಲ್ ಅತ್ತೇಂತೇಳುವ ಹೆಸ್‌ರು ನೆನ್ಪಾಗಿ ನಗೆ ಬಾತಿತ್" ಅಮ್ಮ ಕತೆ ನಿಲ್ಸಿ ಆಕಳ್ಸಿತ್. ಈಗ ನೆಗಾಡುವ ಸರ್‍ದಿ ನಂದ್.

ಬಿ. ಸಿ. ದೇವಿಪ್ರಾಸದ, ಸಂಪಾಜೆ ಗ್ರಾಮ

---

## ಕಟ್ಟಿ, ಬನ್ನಿ ಬೀಡನ್ನು - ಕಾವೇರಿ ನಾಡಲ್ಲಿ

ಮೈ ಕೊರೆವ ಚಳಿ, ದಟ್ಟವಾಗಿ ಮುಸುಕಿದ ಮಂಜು ಆಗೊಮ್ಮೆ-ಈಗೊಮ್ಮೆ ಬೀಸುವ ಕುಳಿರ್ಗಾಳಿ. ಹಾಂ! ನಿಮ್ಗೆ ಚಳಿಗಾಲದ ಕೊಡಗಿನ ಕಲ್ಪನೆಯಾಗಿರ ಬೇಕಲ್ಲವೆ? ಅಲ್ಲ. ಹಾಗೆಯೇ ಇರುವ ಕಾವೇರಿನಾಡಿನ ಸೊಗಸಿನ ವಾತಾವರಣ ಇದು.

ದೇಶದ ಮೂಲೆ ಮೂಲೆಗಳಿಂದ ಗೌಡ ಬಂಧುಗಳನ್ನು ಆಕರ್ಷಿಸಿದ ನೆಲ ಕಾವೇರಿಮಾತೆಯ ಅನುಗ್ರಹದಿಂದ ಕನಸುಗಾರ ಅಮ್ಮಾಜೀರ ಪೊನ್ನಪ್ಪನ ಮೂಲಕ ನಾಡದ ಭೂಮಿ ಇದು.

ಕೇವಲ ಒಂದು ಜನಾಂಗದ ಅಭಿವೃದ್ಧಿಗಾಗಿ ಶ್ರಮಿಸುವುದು ಕಷ್ಟದ ಕೆಲಸವಾಗಿರುವಾಗ ಅತ್ಯಲ್ಪ ಜನಸಂಖ್ಯೆ ಇರುವ ಅರೆಭಾಷೆ ಗೌಡ ಜನಾಂಗದ ಏಳಿಗೆಗಾಗಿ ದುಡಿಯುವುದಕ್ಕಾಗಿ ಸಂಪೂರ್ಣ ಶ್ರಮದ ಅಗತ್ಯವಿದೆ. ನಶಿಸುತ್ತಿರುವ ನಮ್ಮ ಜನಾಂಗದ ಪದ್ಧತಿ, ಆಚಾರ, ವಿಚಾರ, ಉಡುಗೆ ತೊಡುಗೆಗಳನ್ನು ಉಳಿಸಿ ಬೆಳೆಸಲು ಇಡೀ ಜನಾಂಗದ, ಹತ್ತು ಹಲವಾರು ಸಂಘ ಸಂಸ್ಥೆಗಳ ಸಹಕಾರದ ನಿಲುವು ಅಗತ್ಯ, ಈ ರೀತಿಯಲ್ಲಿ ಇರುವಾಗ ಎಲ್ಲಾ ಗೌಡ ಬಂಧುಗಳನ್ನು ಒಗ್ಗೂಡಿಸಿ ಕೊಡಗಿನ ಗಡಿದಾಟಲು ಹೆಣಗುತ್ತಿರುವ ಅರೆಭಾಷೆಗೌಡರ ಪದ್ಧತಿಯನ್ನು ಕ್ಯಾಸೆಟ್ಟುಗಳ ಮೂಲಕ, ಹಬ್ಬ-ಹರಿದಿನ, ಸಭೆಗಳನ್ನು ನಡೆಸುವ ಮೂಲಕ ಪ್ರಚಾರ ಪಡಿಸುತ್ತಿರುವ ಕಾರ್ಯ ನಿಜವಾಗಿಯೂ ಶ್ಲಾಘನೀಯವಾದುದು.

ಸಾಮಾಜಿಕ ಕಾರ್ಯದಲ್ಲಿ ತೊಡಗಿರುವಾಗ ಹತ್ತು ಹಲವಾರು ಟೀಕೆ-ಟಿಪ್ಪಣಿಗಳು ಬರುವುದು ಸಾಮಾನ್ಯ. ಈ ನಿಟ್ಟಿನಲ್ಲಿ ಗೌಡರ ನಾಡಾಗಿ ಬೆಳೆದು ಹೆಮ್ಮರವಾಗುತ್ತಿರುವ ಕಾವೇರಿನಾಡಿನಲ್ಲಿ ತಮ್ಮ ಬೀಡನ್ನು ಕಟ್ಟಲು ಇದು ಉತ್ತಮ ಸಮಯ ಈಗಾಗಲೇ ನಿವೇಶನಗಳ ಹಂಚಿಕೆ ಕಾರ್ಯ ಹಾಗೂ ನೊಂದಾವಣೆ ಕಾರ್ಯಗಳು ಬಿರುಸಿನಿಂದ ನಡೆದಿದೆ. ಸೈಟುಗಳ ಹಣಸಂದಾಯ ಮಾಡಲು ಬಾಕಿ ಇರುವ ಸದಸ್ಯರು ಶೀಘ್ರವಾಗಿ ಸಂದಾಯಮಾಡಿ ತಮ್ಮ ಹೆಸರಿಗೆ ವರ್ಗಾಯಿಸಿ ಕೊಳ್ಳಲು ಇದೊಂದು ಸುಸಂದರ್ಭವಲ್ಲವೆ.

ಜನಾಂಗದ ಅಭ್ಯುದಯ ಹಣದ ಪ್ರಶ್ನೆಯಲ್ಲ ಅದೊಂದು ಪ್ರತಿಷ್ಠೆ - ಪ್ರೇಮದ ಸಂಕೇತ. ಈ ಒಂದು ನಿಟ್ಟಿನಲ್ಲಿ ಒಗ್ಗೂಡಿ ದುಡಿಯೋಣ - ಬನ್ನಿ ಕಾವೇರಿ ನಾಡನ್ನು ಕಟ್ಟೋಣ.

ಅಮ್ಮಾಜೀರ ಕಿರಣ್ ಸಣ್ಣಪ್ಪ
ಕಾವೇರಿ ನಾಡು ವಿದ್ಯಾಸಂಸ್ಥೆ, ಬೆಂಗಳೂರು

ಅಂಗೈ ಹುಣ್ಣಿಗೆ ಕನ್ನಡಿ ಏತಕ್ಕೆ

# ವಿಪರ್ಯಾಸ

ನಾನ್ ನನ್ನ ತಂಗಿಗೆ ಮದುವೆಗೆಂತ ಗಂಡ್‌ಗಳನ್ನು ನೋಡ್ತಾ ಇದ್ದೆ. ನಮ್ಮ ಜನಾನೇ ಬೇಕೂಂತ ಬೆಂಗಳೂರ್‌ಲಿ ಗೊತ್ತಿರುವ್ರಕ್ಕೆಲ್ಲ ಹೇಳಿಟ್ಟೆ. ಏನೊಂದು ವ್ಯತ್ಯಾಸ ಇಲ್ಲದೆ ದಿನಂಗ ಹೋಗ್ತಾ ಇತ್. ಗೂಡೆಗೆ ದಿನದಿಂದ ದಿನಕ್ಕೆ ಪಯಸ್ಸಾಗ್ತಾ ಇತ್. ನೋಡಿಕೆ ಚೆನ್ನಾಗಿಟ್ಟು. ಓದಿಟ್ಟು. ಒಳ್ಳೆ ಕಂಪನಿಲಿ ಪ್ರೈವೇಟ್ ಕೆಲ್ಸಲೂ ಉಟ್ಟು. ಆದರೆ ಇದರ ಹಣೆ ಬರಹ ಏಕೆ ಹಿಂಗೆ ಅಂತ ನಾನ್ ದಿನ ರಾತ್ರಿ ಎಲ್ಲಾ ಕೊರಗ್ತಾ ಇರ್ಕನ ನನ್ನ ಗೆಳತಿ ಹೇಳ್ತ್ ಇನ್ ನೀನ್ ಅವ್ರುಇವು ನಿಮ ಮನೆಗೆ ಬಂದೇವೇಂತ ಕಾಯ್ದುರ್‌ಲ್ಲಿ ಅರ್ಥ ಇಲ್ಲೆ. ನೀ ಒಂದು ಕೆಲ್ಸ ಮಾಡ್ free Advertisement ಅಂತ ಪೇಪರ್ ಉಟ್ಟು ಅದರಲ್ಲಿ ಫ್ರೀ ಆಗಿ ಅಡವರ್‌ಟೈಸ್‌ಮೆಂಟ್ ಹಾಕುವೆ, ಹಾಕ್‌ಇಂತ ಹೇಳ್ತ್. ಯಾಕೆ ಟ್ರೈ ಮಾಡುದು ಬೇಡ ಅಂತ್ಹೇಳಿ ಹಾಕಿದೆ. ಸುಮಾರ್ ಲೆಟರ್ ಬಾತ್. ಎಲ್ಲಾ ಬೇರೆ ಜಾತಿಯುವು ಹೈದಂಗ ಒಳ್ಳೊಳ್ಳೆ ಕೆಲ್ಸಲಿ ಇದ್ದೊ. ಗೂಡೆಗೇಕೊ ಇಷ್ಟ ಆತ್‌ಲೆ. ಅವಳಿಗೆ ನಮ್ಮವೇ ಆಕೂಂತ ಕುದ್ದತ್. ಕೊನೆಗೆ ಒಂದು ಹೈದ ನಮ್ಮ ಕೊಡಗಿನಂವ ಬಾತ್. ನಮ್ಮ ಕಡೆವೇ ಅಂತ ತಿಳ್ದ್ ಗೂಡೆಗೆ ಆದ ಸಂತೋಷ ಅಷ್ಟಿಷ್ಟಲ್ಲ. ಹೈದನ ಹತ್ರ ಮಾತಾಡಿ ಗೂಡೆನ ನೋಡಿಕೆ ವ್ಯವಸ್ಥೆ ಮಾಡ್ದೆ. ಹೈದಂದ್ ಆತ್ ನಾನ್ ಗೂಡೆನ ಆಫೀಸ್‌ನಲ್ಲಿ ನೋಡಿ ಮತ್ತೆ ಮನೆಗೆ ಬನ್ನಿ ಅಂತ. ಹೆಣ್ಣ್ ಕಡೆವ್ರು ಅಲ ಎಲ್ಲದಕ್ಕೂ ಸೈ ಅನ್ನೋಕು ಅಲ. ಆತ್ ಗೂಡೆನ ಪೋನ್ ನಂಬರ್ ಕೊಟ್ಟು ಮಾತಾಡಿಕೆ ಹೇಳ್ದೊ. ಅಂವ ತುಂಬಾ ಚೆನ್ನಾಗಿ ಮಾತಾಡ್ತ್ ಗಡ. ಬೆಂಗಳೂರ್‌ಲಿ ನಮ್ಮ ಭಾಷೆ, ಜಾತಿ ಗೂಡೆ ಸಿಕ್ಕಿದಕ್ಕೆ ಸಂತೋಷ ಪಟ್ಟಿತ್‌ಗಡ. ಗೂಡೆಗೆ ಆದ ಖುಷಿಗೆ ಎನೊ ಇಲ್ಲೆ, ಇಂತ ದಿನ ಬನ್ನೆ ಅಂತ ಹೇಳಿ ಡೇಟ್ ಫಿಕ್ಸ್ ಮಾಡ್ತ್‌ಗಡ. ಅಂದ್ ಗೂಡೆನ ಆಫೀಸ್‌ಗೆ ಸಾಯಂಕಾಲ ಬಾತ್‌ಗಡ. ಗೂಡೆ ಕೆಲಸ ಮುಗಿಸಿ ಹೈದನೊಟ್ಟಿಗೆ ಹೊರಟತ್. ಆಫೀಸ್ ಹತ್ರ ಹೆಂಗೆ ಮಾತಾಡುದು. ಸ್ವಲ್ಪ ದೂರ ಇದ್ದ ಹೋಟೇಲ್‌ಗೆ ಪೋಯ್ ಅಂತ ಇಬ್ಬರೂ ತೀರ್ಮಾನ ಮಾಡ್ದೊ. ಆಗ ಹೈದ ಹೇಳ್ತ್‌ಗಡ ನೀವು ನಡ್‌ಕಂಡ್ ಅಲ್ಲಿಗೆ ಬನ್ನಿ ನಾ ಗಾಡೀಲಿ ಅಲ್ಲಿಗೆ ಹೋನೆ ಅಂತ. ಗೂಡೆಗೆ ಚಪ್ಪಲಲಿ ಹೊಡ್ದಂಗಾತ್. ಹೆಣ್ಣ್ ಅಲ ಸಹಿಸಿ ಕೊಳ್ಳೋಕು. ಸಹಿಸಿಕೊಂಡು ಗೂಡೆ ಅಲ್ಲಿಗೆ ಹೋತ್. ಅಂವ ಅಲ್ಲಿ ಇತ್ತ್ ಗಡ. ಕಾಫೀ ಕುಡೀತಾ ಕುಡೀತಾ ಅಂವ ಹೇಳ್ತ್‌ಗಡ ಇಲ್ಲಿ ನಂಗೆ ಬೇರೆ ಜಾತಿಯವ್ರು ಜಾಸ್ತಿ ಡೌರಿ ಕೊಟ್ಟು ಮದುವೆ ಮಾಡಿಕೊಟ್ಟೆವೇಂತ. ಏನಕ್ಕೂ ಫೋನ್ ಮಾಡಿ ನಾಳೆ ಅಂತ. ನಮ್ಮ ಗೂಡೆ ತುಂಬಾ ನೊಂದ್‌ಕೊಂಡತ್. ಇವಂಗಿಂತ ಬೇರೆ ಜಾತಿ ಹುಡುಗರೇ ಮೇಲು ಅಂತ ಅವು ಹೆಣ್ ಮಕ್ಕಳಿಗೆ ಸ್ವಲ್ಪವಾದರೂ ಗೌರವ ಕೊಟ್ಟವೆ. ನನ್ನೊಟ್ಟಿಗೆ ಚೆನ್ನಾಗಿ ನಡಕೊಂಡೋಳೊಂತ.

ಆದರೆ ನಮ್ಮ ಜಾತಿ ಹೈದ, ನನ್ನ ಭಾಷೆ ಹೈದ ತನ್ನ ಊರ್‌ನ ಒಂದು ಗೂಡೆ ಜೊತೆ ನಡ್‌ಕಂಡ ರೀತಿ ನೋಡಿ ಅದ್ ಈಗಲೂ ಕೆಂಡ ಕಾರ್ದೆ. ನಮ್ಮವ್ರುಕೆ ತುಂಬಾ ಜಂಭ ಅಂತ. ವಿದ್ಯಾವಂತರಾದ ನಮ್ಮ ಹೈದಂಗಗೇಕೆ ಇಂತ ತಪ್ಪು ತಿಳುವಳಿಕೆ ಗೂಡೆಗಳ ಮೇಲೆ ಯಾಕೆ ಇಂಥ ಸಂಶಯ.

**ಹೇಮಾ ಹೊಸ್ಮನೆ**

11ನೇ ಪುಟದಿಂದ

ಚೀಲದ ಒಳಗೆ ಹಾರಿ ಕುದ್ದತ್. ಬ್ಯಾಗ್‌ದ್ ಜಿಪ್ಪ್ ಹಾಳಾಗಿತ್. ಅದನ್ನ ಸೇರಿಕ್ಕೆ ಆತ್‌ಲ್ಲೆ. ಅದ್ ಒಂದ್ ರೀತಿಲಿ ಕಪ್ಪೆಗೆ ಒಳ್ಳೆದೇ ಆತ್. ಕಪ್ಪೆ ಬಾಳೆ ಹಣ್ಣ್ ಚಿಪ್ಪ್‌ಲಿ ಅಡಗಿ ಕುದ್ದತ್. ಮಡಿಕೇರಿಂದ ಹೊರಟ ಬಸ್ಸ್ ಮದ್ದುರ್‌ಲಿ ಹತ್ರ ಕಾಫಿ ಕುಡಿಯಕೆ ನಿಲ್ಸಿದ್ದೋ. ಲಾಲಿ ಗೂಡೆ ಬಾಳೆ ಹಣ್ಣ್ ತಿಮ್ಮನೂತ ಹೇಳಿ ಬ್ಯಾಗ್‌ಗೆ ಕೈಹಾಕಿರೆ ಕಪ್ಪೆ ಲಾಲಿಗೆ ಕಪ್ಪೆದ್ ಗ್ಯಾನನೆ ಇಲ್ಲೆ ಕಿರ್‌ಚಿತ್. ಅಷ್ಟೊತ್ತಿಗೆ ಕಂಡಕ್ಟರ್ "ಏನಮ್ಮ ಏನಮ್ಮತ ಕೇಳಿಕಂಡ್ ಬಾತ್, ಏನಿಲ್ಲಾ ಕಂಡಕ್ಟರೇ ತ ಹೇಳ್ತ್. ಅಷ್ಟೊತ್ತಿಗೆ ಕಪ್ಪೆ ಅವಳ ಕಾಲ್ ಹತ್ತಿರ ಹಾರ್‌ತ್. ಅದನ್ನ ಹಿಡದ್ ವ್ಯಾನಿಟ್ ಬ್ಯಾಗ್‌ಗೆ ಹಾಕಿ ಕಿಟಕಿ ಸರಳಿಗೆ ನೇತಾಕಿತ್. ಎಲ್ಲಿ ನನ್ನ ಮರ್ಯಾದೆ ಹೋದೆತ್ತಾ ಸುಮ್ಮನೆ ಕುದ್ದತ್. ಆಗ ಬ್ಯಾಗ್‌ಂದ ಕಪ್ಪೆ ಕಿಟಕಿ ಕಡೆ ನೋಡ್‌ತ್ತಿತ್. ಅದ್ ಎಲ್ಲಿ ಹಾರಿದೆತ್ತಾ ಹೇಳಿ ಪುನಃ ಬ್ಯಾಗ್‌ನ ಮೊಟ್ಟೆಮೇಲೆ ಇಟ್ಟ್‌ಕಣ್‌ತ್.

ಜಾಲಿ ಸುಮ್ಮನೆ ಕೂರುತ ಹೇಳ್‌ಕನ ಕಂಡಕ್ಟರ್ ಯಾರಲ್ಲಿ ಟಿಕೇಟ್ ಕೇಳಿ ಪಡಿಕೊಳ್ಳಿತ ಕರ್‌ದ್ ಕರ್‌ದ್ ಹೇಳ್‌ತಿತ್ತ್. ಹೆಂಗೂ ಜಾಲಿನು ಲಾಲಿನು ಬೆಂಗಳೂರ್ ತಲಪಿತ್. ಅಲ್ಲಿಂದ ಲಾಲಿ ಮನೆಗೆ City ಬಸ್ಸ್‌ಲಿ ಹೋಕು ಮತ್ತೆ ಜಾಲಿನ ಲಾಲಿ ಪುನಃ ಹಣ್ಣ್‌ಗಳ ಚೀಲಕ್ಕೆ ಹಾಕಿತ್. ಸದ್ದಿಲ್ಲದೆ ಲಾಲಿನು ಜಾಲಿನು ಮನೆ ಸೇರ್‌ದೋ. ಕತ್ತಲಾಗಿತ್, ನಂಟರ ಮನೆ ಮಕ್ಕಲ್ಲಾ ಸೇರಿ ಕಂಡ್ ಹಳ್ಳಿಂದ ತಂದ ಲಗ್ಗೇಜ್ ಬಿಚ್ಚಿ ನೋಡ್‌ಕನ ಜಾಲಿ ಪುಳಕ್‌ತ ಹಾರಿ ಹೋಗಿ ಅಡುಗೆ ಮನೆ ನೀರ್ ಹಂಡೆ ಅಡಿಲಿ ಅಡಗಿ ಕುದ್ದತ್. ಮಾರನೇ ದಿನ ಲಾಲಿಗೂಡೆ ಜಾಲಿನ ಕರಕಂಡ್ ಲಾಲ್ ಬಾಗ್, ಕಬ್ಬನ್ ಪಾರ್ಕ್, ವಿಧಾನ ಸೌಧ ಎಲ್ಲಾ ತೋರ್ಸಿ ತುಂಬಾ ಇಷ್ಟಾತ್. ಕಡೆಗೆ ಕಾರ್‌ಗಳ ಸದ್ದ್‌ಗೇಳಿ ಅದಕ್ಕೆ ಆಶ್ಚರ್ಯ ಆಗಿತ್ತ್. ಇನ್ನು ವಾಪಾಸ್ ಪೋಯಿತ್ತೇಳಿ ಜಾಲಿನ ಕರಕಂಡ್ ಅಲಸೂರ್ ಕೆರೆಗೆ ಬಾತ್. ಜಾಲಿಗೆ ನೀರ್ ಕಾಂಬೋದೇ ತಡ ತುಂಬಾ ಖುಷಿಯಾತ್. ಲಾಲಿ ಜಾಲಿನ ಕರ್‌ದ್ ದೋಣಿಲಿ ಕೂರಿಸಿಕಂಡ್ ಒಂದು ರೌಂಡ್ ಹಾಕ್‌ಕಾಕನ ನೀರ್ ಕಂಡ ಜಾಲಿ ಒಂದೇ ನೆಗೆತಕ್ಕೆ ಹಾರಿ ಲಾಲಿಗೆ ಟಾ ಟಾ ಮಾಡ್‌ತ್.

**ಆಜಡ್ಕ ರಾಣಿ ಬಾಲ ಕೃಷ್ಣ, ಕುಶಾಲನಗರ**

---

## ಗಾದೆಗಳು

ಅತ್ತೂ ಕರೆದು ಔತಣಕ್ಕೆ ಕರೆಸಿಕೊಂಡನಂತೆ

ಅಮ್ಮ ಸತ್ತಮೇಲೆ ಅಪ್ಪ ಚಿಕ್ಕಪ್ಪ

---

## ವೈಕುಂಠ ವಾಸಿ

ದಿನಾಂಕ 22-1-200 ಶನಿವಾರ ಅರ್ವತೋಕ್ಲು ಗ್ರಾಮದ ತುಂತಜೆ ಬಿದ್ದಪ್ಪನವರು ನಿಧನರಾದರು. ಇವರಿಗೆ 76 ವರ್ಷ ಪ್ರಾಯವಾಗಿತ್ತು. ಇವರ ಪತ್ನಿ, ನಾಲ್ಕು ಗಂಡು ಮಕ್ಕಳು ಹಾಗೂ ನಾಲ್ಕು ಹೆಣ್ಣು ಮಕ್ಕಳು ಮತ್ತು ಮೊಮ್ಮಕ್ಕಳು, ಅಪಾರ ಬಂಧು ಬಳಗದವರನ್ನು ಅಗಲಿದ್ದಾರೆ.

ಆರೋಗ್ಯವಿಲ್ಲದ ಬಾಳು ಅನುದಿನವು ಗೋಳು

# ಪತ್ರ ವಿಭಾಗ :



### ಭಾಷೆಯಲ್ಲಿ ತಪ್ಪು ಕಲ್ಪನೆ ಅರಿವು ಇಲ್ಲದವರ ಹೇಳಿಕೆ

ಈ ದೇಶದ ಎಲ್ಲಾ ಜನಾಂಗಗಳಲ್ಲಿ ಅರ್ಧಭಾಷೆ (ಅರೆಭಾಷೆ) ಎಂಬುವುದು ಎಲ್ಲಿಯಾದರೂ ತೋರಿಸುತ್ತೀರಾ? ಹಾಗಿದ್ದ ಮೇಲೆ ದಕ್ಷಿಣ ಕನ್ನಡ ಮತ್ತು ಕೊಡಗಿನ ಗೌಡರ ಭಾಷೆಗೆ ಅರೆಭಾಷೆ.ಎಂದು ಯಾರೂ ಕರೆಯಬಾರದು. ಈ ಭಾಷೆ ಗೌಡ ಕನ್ನಡ ಅಥವಾ ನಡು ಕನ್ನಡ ಎಂದು ಕರೆಯಬಹುದು. ಇದು ಗೌಡರ ತಾಯಿ ಭಾಷೆ ಹಾಗಿದ್ದ ಮೇಲೆ ಗೌಡರಿಗೆ ಅರ್ಧ ತಾಯಿ ಎಂದು ಕರೆಯಬಹುದೇ? ನೀವೇ ಹೇಳಿ? ನಮ್ಮ ಗೌಡ ಜನರಿಗೆ ನಮ್ಮ ಭಾಷೆಯನ್ನು ಮಾತನಾಡಲು ತುಂಬಾ ನಾಚಿಕೆ. ಯಾರೇ ಆದರು ನಮ್ಮ ಭಾಷೆಯನ್ನು ಮಾತನಾಡಲು ಇತರರು ಇಷ್ಟಪಟ್ಟರೆ ಅವರಜೊತೆಯಲ್ಲಿಯೂ ಮಾತನಾಡಿ. ನಮ್ಮ ಗೌಡ ಜನರು ನಾಲ್ಕು ಇದ್ದು ಇತರರು ಹತ್ತು ಜನರಿದ್ದರೆ ಸಾಕು ನಮ್ಮ ಭಾಷೆಯನ್ನು ಬಿಟ್ಟು ಇತರರ ಭಾಷೆಯನ್ನು ಮಾತನಾಡಲು ಪ್ರಾರಂಭಿಸುತ್ತಾರೆ. ಇದು ಸರಿಯೆ? ಇನ್ನು ಮುಂದೆಯಾದರೂ ನಮ್ಮ ಭಾಷೆಯನ್ನು ಮಾತನಾಡುತ್ತಾ ಇತರರನ್ನು ನಮ್ಮ ಭಾಷೆಯಲ್ಲಿಯೇ ವ್ಯವಹರಿಸುವಂತೆ ಮಾತನಾಡಿದರೆ ಅರೆಭಾಷೆ ತಾಯಿ ಭಾಷೆಯನ್ನು ಉಳಿಸಿಕೊಳ್ಳೋಣ.

ಕುದುಕುಳಿ ಸುಬ್ಬಯ್ಯ
ಸೂರ್ಯ ಪವರ್ ಪ್ರೆಸ್, ಕುಶಾಲನಗರ

---

### ಚಾಂಪಂಗೆ ಆರಿ ಕೋಳಿ ತಿಂಬಕ್ಕೆ ಆಸೆ ಚಾಮುಣಿ ಹೈದನ ಉಪಾಯ

ನಮ್ಮ ಚಾಂಪಂಗೆ ಆರಿ ಕೋಳಿ ತಿಂಬಕ್ಕೆ ಆಸೆ ಆಗಿ ಏನ್ ಮಾಡ್ತ್ ಗೊತ್ತುಟ್ಟಾ ನಿಮಿಗೆ. ಒಂದು ದಿನ ಬೆಳಿಗ್ಗೆ ಚಾಂಪ ನನ್ನ ಕರ್ದ್ ಅಲ್ಲನೇ ಚಾಮುಣಿ ಹೈದ ಚಾಂಪನೊಟ್ಟಿಗೆ ಹೇಳ್ತ್ ಚಾಂಪ ಅವ್ವ ಆಲ್‌ಪರೆ ಬೋಜಪ್ಪಮಾನಿಗೆ ದೊಡ್ಡ ಅಗೆ ಹೋವುಟ್ಟು. ಅವ್ವ ಬಂದಂಗೆ ಹೇಳಿನೆ ತಾ. ಆಗ ಚಾಂಪಂಗೆ ಕುಷಿ ಆತ್ ಹೆಂಗೂ ಇಂದ್ ಕೋಳಿ ಕಡುಂಬು ಉಟ್ಟುತಾ. ಅಂದ್ ಮಧ್ಯಾಹ್ನ ಚಾಂಪ ಉಂಡತ್ ಸಹಾ ಇಲ್ಲೆ. ಅವ್ವ ಸಾಯಂಕಾಲ ಕರ್‌ಬುಡೋ ಹೊತ್ತಿಗೆ ಮನೆಗೆ ಬಾತ್.

ಚಾಮುಣಿ ಹೈದ ಹೇಳ್ತ್, ಅವ್ವನತ್ತ್‌ರ, ಅವ್ವ ಅಪ್ಪಾ ಚಾಂಪಂಗೆ ಆರಿ ಕೋಳಿ ತಿನ್ನ ಕೂಡ. ಕೋಳಿ ಗೈಪು ತಿಂಬಕ್ಕೆ ಆಸೆ ಆದೆಗಡ ಅಗ ಅವ್ವ ಹೇಳ್ತ್. ಚಾಂಪಂಗೆ ಆಸೆ ಆದಾ ನಿಂಗೆ ಆಸೆ ಆದಾತ. ಚಾಮುಣಿ ಹೈದ ಹೇಳ್ತ್ ಇಲ್ಲೆ ಅವ್ವ ಚಾಂಪ ಹೇಳ್ದ್ ನಾನ್ ಹೇಳ್ದ್ ಸುಳ್ಳಾದರೆ ಚಾಂಪನೊಟ್ಟಿಗೆ ನೀನೇ ಕೇಳ್ ಬೇಕಾದರೆ.

ಸರಿ ಅವ ಹೇಳ್ತ್ ಅಪ್ಪನೊಟ್ಟಿಗೆ ಹೇಳಿ ಕೋಳಿ ಕೊಲ್ಲೊನುತಾ ಈಗ ಮಳೆ ಆದರಿಂದ ಕೋಳಿಗ ಎಲ್ಲಾ ಯಾಚಾರ್ ಆಗೊಳೊ. ಮಳೆ ಸ್ವಲ್ಪ ಕಮ್ಮಿ ಆಗಲಿ ಆಗ ನಮ್ಮ ಮೊಕ್ಕಿಗದ್ದೆ ನಾಟಿ ಸಹ ಆದೆ. ಮತ್ತೆ ಕೊಲ್ಲೊನುತಾ. ಏನ್ ಮಾಡ್ದು? ಆಗ ಚಾಮುಣಿ ಹೈದ ಗ್ಯಾನ ಮಾಡ್ತ್ ಒಂದು ಉಪಾಯ ಚಾಮುಣಿ ಹೈದ ನೆಟೆಟಂಗೆ ಚಾಂಪ ಮಲ್ಗಿದ ಕೋಂಬರೆಗ ಹೋತು. ಬಾಗ್‌ಲ್ ಕರೇಲಿ ನಿತ್ತ್‌ಕಂಡ್ ಚಾಂಪಂಗೆ ಹೇಳ್ತ್, ಚಾಂಪ, ಚಾಂಪಾ, ನಾನ್ ಅವ್ವಂಗೆ ಹೇಳ್ದೆ! ಆಗ ಅವ್ವ ಹೇಳ್ತ್ ಕೋಳಿಗ ಲಾಚಾರ್ ಆಗೊಳೊ ಮೊಕ್ಕಿಗದ್ದೆ ನಾಟಿ ಆದ ಮ್ಯಾಲೆ ಕೊಲ್ಲೊನುತಾ ಇಲ್ಲಿ ಚಾಂಪನೊಟ್ಟಿಗೆ ಚಾಮುಣಿ ಹೈದಂಗೂ ಆಸೆ ಹತ್ತಿ ಹೋವುಟ್ಟು.

ಈಗ ಚಾಮುಣಿ ಹೈದ ಹೇಳ್ತ್ ಚಾಂಪ ಈ ಅವ್ವಮೊನಿ ಹೆಂಗೂ ಕೋಳಿ ಕೊಲ್ಲುದುಲೆ. ನಾನ್ ನಿಂಗೆ ಒಂದು ಉಪಾಯ ಹೇಳಿನೆ. ನೀನ್ ಹಂಗೇ ಮಾಡ್ ನಿಂಗೆ ಆದರೆ ಅವ್ವಮಾನಿ ಬೊಯ್ಯೊದುಲೆ. ನಂಗೆ ಆದರೆ ಬೊಯ್ಯೊದು ಹೋಗಲಿ ಅರ್‌ಕಟ್ ಬೊಳ್ಳಿಲಿ ಹೊಡ್ದ್ ನನ್ನ ಮಡಿಗಿಕಿಲೆ. ಈಗ ಚಾಮುಣಿ ಹೈದ ಉಪಾಯ ಹೇಳಿಕೆ ಸುರು ಮಾಡ್ತ್, ಚಾಂಪ ನೀನ್ ಬೆಳಿಗ್ಗೆ ಹೆಂಗೂ ಗುಂಡಿ ತೋಟಕ್ಕೆ ನೀರ್ ತಕ್ಕಂಡ್ ಬಾಳೆ ಬುಡಕ್ಕೆ ಹೋದಿಯಲಾ ಹೌದು ಹೋನೆ! ಆಗ ನೀನ್ ಹೋಗಿ ಬಾಳೆ ಬುಡಲಿ ಕುದ್ದ ಮ್ಯಾಲೆ, ನಾನ್ ಕೋಳಿ ಗೂಡಿಂದ ಕೋಳಿಗಳ್ನ ಬುಟ್ಟನೆ. ನೀನ್ ಜೋರಾಗಿ ಬುಕ್ಕೆಂಡ್ ಇರೋಕು. ಆಗ ಅಲ್ಲಿಗೆ ಕೋಳಿಗ ಓಡಿ ಬಂದವೆ ಆಗ ನೀನ್ ಕೆಂಪು ಕಡ್ಲ ಹುಂಜನ ಹಿಡ್ದ್ ಕುತ್ತಿಗ್ಯನ ಹಿಂಚಿ ಬುಡು ಮತ್ತೆ ಅದರ ಕುತ್ತಿಗೆ ಹತ್ತ್‌ರ ಉಗುರುಲಿ ಜಿಂಟಿ ಕುದ್ಕಕಟ್ಟಿದಂಗೆ ಅಲ್ಲಿ ಇಲ್ಲಿ ಯಲ್ಲಾ ಸ್ವಲ್ಪ ಗಾಯಮಾಡಿ ತೊಪ್ಪುಚಿನಾ ಅಲ್ಲಿ ಇಲ್ಲಿ ಯಲ್ಲಾ ಸ್ವಲ್ಪ ಕೋಳಿ ಕೆಕ್ಕೀ ಕೆರ್ರೆತ್ತ್‌ಳ್‌ಕನ ನಾನ್ ಟಾಮು ನಾಯಿನ ಚೂ ಕೊಡ್ಸಿ ಕಂಡ್ ಓಡಿ ಬನ್ನೆ. ಆಗ ನಮಿಗೆ ಇಂದೇ ಕೋಳಿಗೈಪು ತಿನ್ನಕ್ ಗೊತ್ತಾತ ಚಾಂಪಾ?

ಅಲ್ಲಿಂದ ಬಂದ್ ನಾನು ಅವ್ವಂಗೆ ಹೇಳಿನೆ ಚಾಂಪ ಬಾಳೆ ಬುಡಲಿ ಕುದ್ದ್‌ಕಂಡ್ ಬುಕ್ಕ್‌ಕಾಕನ ಕೋಳಿಗ ಅಲ್ಲಿಗೆ ಬಂದೋಗಡ. ಚಾಂಪ ಕೋಳಿಗಳ ಅತ್ತ ಬೆರ್ಸೀ ಗೈಪುನ ಬಾಳೆ ಬುಡಲಿ ಕುದ್ದ್‌ತ್ತ ಗಡ, ಕೋಳಿಗ ಎಂತಕ್ಕೋ ಕೊಟಕೊಡ್‌ದೋಗಡ, ನೋಡ್ಕನ ಬಂದು ಕುದಂ ಬಂದ್ ಕಡ್ಲೆ ಹೋಂಜನ ಕುತ್ತಿಗ್ಯನ ಹಿಡ್ದೇ ಬುಟ್ಟುಟುಗಡ. ಚಾಂಪ ಮೆಲ್ಲೆ ಗೈಪುನ ಬಾಳೆ ಬುಡಂದ ಬಂದು ಕಲ್ಲ್ ಬೀಸಿ ಹೋಡ್ಯಕನ ಕುದ್ ಕೋಳಿನ ಬುಟ್ಟ್ ಒಂದೇ ಓಟಗಡ. ಕೋಳಿ 'ರಪ್ಪ, ರಪ್ಪ' "ಪಡ ಪಡ"ತ್ತೇಳಿ ಬಿದ್ದೇ ಹೋತು ಈಗ ಕೋಳಿ ಸತ್ತತ್ತ್, ಚಾಂಪಂಗೆ ಆರಿಕೋಳಿ ತಿಂಬಕ್ಕೆ ಸಿಕ್ಕಿತ್ತ್. ಚಾಮುಣು ಹೈದನ ಕೋಳಿ ಕೊಲ್ಲುವ ಉಪಾಯನೂ ಕುದ್‌ರ್ತ್. ಒಂದು ಆವರ ಕಳ್ದ್ ತಿಂಬ ಕೋಳಿ ಮೊಕ್ಕಿಗದ್ದೆ ವಾಟೆಗೆ ಮುಂದೇ ತಿಂದ್ ಆತ್. ಚಾಂಪನ ಆಸೆ ಒಟ್ಟಿಗೆ ಚಾಮುಣು ಹೈದನ ಆಸೆನೂ ತೀರ್ತ್. ಹಂಗೂ ಹಿಂಗೂ ಆರಿ ಕೋಳಿ ತಿಂದ್ ಆತ್.

ಹ್ಹಾಂ! ನಿಮ್ಮ ನಿಮ್ಮ ಮನೆಲಿ ಚಾಂಪಂದರ್ ಇದ್ದರೆ ಇನ್ನ್ ಮ್ಯಾಲೆ ಉಷಾರ್. ಚಾಂಪಂದರ್ನ್ ಬಾಳೆ ಬುಡಲಿ ಕೂರಿಕೆ ಬುಡದೆ. ಬೊಳಿ ಬಾಣೆಗೆ ಹೋಕೆ ಹೇಳಿ. ಇಲ್ಲರೆ ಚಾಂಪಂದರ್ ಕುತ್ತಿಗೆ ಹಿಂಚಿ ಕುದುಕನ ಮ್ಯಾಲೆ ಹೋಳ್‌ವೋಗೊತ್ತಾತ.

ಹೆಂಗೆ ಉಟ್ಟು, ಈಗ ಚಾಂಪ ಉಷಾರಾ? ಕುದ್ ಉಷಾರಾ ನೀವೇ ಹೇಳಿ?

ಪುದಿಯ ನೆರವನ ಸರಸ್ವತಿ ಉತ್ತಪ್ಪ, ಯಶವಂತಪುರ

12ನೇ ಪುಟದಿಂದ

ವಿಧಾನ : ಮೇಲೆ ಹೇಳಿ ಜಿನಸುಗಳನ್ನು ಹುರಿದು ಪುಡಿಮಾಡಿ ಸುರಕ್ಷಿತವಾಗಿ ಇಟ್ಟುಕೊಳ್ಳಿ. ಅರಿಸಿನ ತುಂಡು ಮತ್ತು ಒಣಮೆಣಸಿನಕಾಯಿ ಇವುಗಳನ್ನು ಬೇರೆ ಬೇರೆಯಾಗಿ ಕುಟ್ಟಿ ಪುಡಿ ಮಾಡಿ. ಉಳಿದ ಮಸಾಲೆಯನ್ನು ಕುಟ್ಟಿ ಪುಡಿಮಾಡಿ ಜರಡಿಯ ಮೂಲಕ ಸೋಸಿ. ಕರಿಬೇವಿನ ಮತ್ತು ಕೊತ್ತಂಬರಿಯ ಹುರಿದ ಒಣಸೊಪ್ಪು. ಒಣಕೊಬ್ಬರಿ ಬೆಳ್ಳುಳ್ಳಿ ಮತ್ತು ಈರುಳ್ಳಿ ಇವುಗಳನ್ನು ಕುಟ್ಟಿ ಪುಡಿಮಾಡಿ. ಆಮೇಲೆ ಎಲ್ಲಾ ಜೀನಸುಗಳನ್ನು ಒಟ್ಟಿಗೆ ಸೇರಿಸಿ ಬೆರೆಸಿ ಭರಣಿಯಲ್ಲಿ ಹಾಕಿಟ್ಟುಕೊಳ್ಳಿ. ಇದು 5-6 ತಿಂಗಳುಗಳವರೆಗೆ ಹಾಳಾಗದೆ ಉಳಿಯುತ್ತದೆ. ಬೇಳೆಯ ಸಾರು, ಎಣ್ಣೆಗಾಯಿ ಪಲ್ಯಗಳಿಗೆ ಬೇಕಾದಾಗ ಉಪಯೋಗಿಸಬಹುದು.

**ಹುಳಿಗೆ ಹಾಕುವ ಮಸಾಲೆ ಪುಡಿ**

**ಬೇಕಾಗುವ ಸಾಮಾನು :** ½ ಕಪ್ ಉದ್ದಿನ ಬೇಳೆ, 2 ಕಪ್ ಕೊತ್ತಂಬರಿ ಬೀಜ ½ ಕಪ್ ತೊಗರಿಬೇಳೆ, 1 ಕಪ್ ಖಾರದ ಪುಡಿ, 1 ಕಪ್ ಕಡಲೆ ಬೇಳೆ, 1 ಸೌಟ್ ಜೀರಿಗೆ, 1 ಸೌಟು ಸಾಸಿವೆ, 1 ಸಣ್ಣ ಚೂರು ಇಂಗು, 1 ಟಿ. ಚ. ಮೆಂತೆ.

**ವಿಧಾನ :** ಮೇಲೆ ಹೇಳಿದ ಜೀನಸುಗಳನ್ನು ಬೇರೆ ಬೇರೆಯಾಗಿ ಒಣ ಹುರಿದು ಬೀಸಿ ಇಲ್ಲವೆ ಕುಟ್ಟಿ ಪುಡಿ ಮಾಡಿ ಜಾಡಿಯೊಳಗೆ ಹಾಕಿಟ್ಟುಕೊಳ್ಳಿ.

**ಹುಳಿ ಪೌಡರ್**

**ಬೇಕಾಗುವ ಸಾಮಾನು :**

1½ ಊ.ಚ. ಮೆಂತೆ, 10-15 ಒಣ ಮೆಣಸಿನ ಕಾಯಿ, 1½ ಹಿಡಿ ಉದ್ದಿನ ಬೇಳೆ, 2 ಟೀ.ಚ. ಜೀರಿಗೆ, ¼ ಕಪ್ ಕೊತ್ತಂಬರಿ ಬೀಜ, ಹುರಿಯಲು ಬೇಕಾಗುವಷ್ಟು ಎಣ್ಣೆ.

**ವಿಧಾನ :** ಮೇಲೆ ಹೇಳಿದ ಎಲ್ಲಾ ಜೀನಸುಗಳನ್ನು ಕೊಂಚ ಎಣ್ಣೆಯಲ್ಲಿ ಬೇರೆ ಬೇರೆಯಾಗಿ ಹುರಿದು ಪುಡಿ ಮಾಡಿ, ಆಮೇಲೆ ಅವುಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಬೆರಸಿ ಗಾಜಿನ ಬಾಣಲಿಯಲ್ಲಿ ಹಾಕಿಟ್ಟುಕೊಳ್ಳಿ.

---

## ಕೆಲವು ದೇಶಗಳ ರಾಷ್ಟ್ರಗೀತೆ

| ದೇಶ | | ರಾಷ್ಟ್ರಗೀತೆ |
|---|---|---|
| ಭಾರತ | - | ಜನ ಗಣ ಮನ |
| ಜಪಾನ್ | - | ಕಿಮಿತ್‌ಗಯಾ |
| ಸ್ವೀಡನ್ | - | ಸೋಂಗ್ ಆಫ್ ದಿ ಸೋರ್ಡ್. |
| ಸೋವಿಯತ್ ಯೂನಿಯನ್ | - | ಹೈಮ್ಸ್ ಆಫ್ ದಿ ಸೋವಿಯತ್ ಯೂನಿಯನ್ |
| ಫ್ರಾನ್ಸ್ | - | ಲಾ ಮಾರ್ಸೈಲ್ಲಾಯೆಸ್. |
| ಕೆನಡ | - | ದ ಮಾಪ್ಲೆ ಲೀಫ್ ಫಾರ್ ಎವರ್. |
| ಗ್ರೀಸ್ | - | ಹೇಯಿಲ್ ಜ ಹೇಯಿಲ್ ಲಿಬರ್ಟಿ |
| ಇಂಗ್ಲೆಂಡ್ | - | ಗೋಡ್ ಸೇವ್ ದ ಕ್ವೀನ್ |
| ಸಿಂಗಾಪೂರ್ | - | ಮಜಾಲಾಬೇ ಸಿಂಗಾಪ್ಪೆರೆ |

ಯಾಲದಾಳು. ಈ. ಚಂದ್ರಕಲಾ, ಮಡಿಕೇರಿ.

13ನೇ ಪುಟದಿಂದ

ರೂಮಿನಲ್ಲಿ ಬೆಡ್‌ಲೈಟ್ ಉರಿಯುತ್ತಿದೆ.

ರೇವತಿ ಅಂಗಾತನೆ ಮಲಗಿದ್ದಾಳೆ.

ಆ ವ್ಯಕ್ತಿ ಈಗ ಮಂಡಿಯೂರಿ ರೇವತಿಯ ಹತ್ತಿರ ಕುಳಿತು ಕೊಂಡಿತು. ಆ ವ್ಯಕ್ತಿ ಏನನ್ನೋ ಹೊರ ತೆಗೆಯಲು ಎದ್ದು ನಿಂತು ಕಾಲನ್ನು ಹೊರಳಿಸಿತು.

ಕಾಲು ಟೀಪಾಯಿಗೆ ತಗುಲಿತು !

ಅದರ ಮೇಲೆ ಇದ್ದ ನೀರಿನ ಹೂಜಿ ಉರುಳಿಕೊಂಡು ದಢಾರನೆ ಬಿದ್ದಿತು. 'ಡಬ್' ಎಂಬ ಶಬ್ದ !

ರೇವತಿಗೆ ಎಚ್ಚರವಾಯಿತು.

ಕಣ್ಣು ತೆರದಾಗ ಕಂಡಿದ್ದು ಮುಸುಕನ್ನು ಧರಿಸಿದ್ದ ವ್ಯಕ್ತಿ ! ರೇವತಿ ಕಿಟಾರನೆ ಕಿರುಚಿಕೊಂಡಳು !

ಆ ವ್ಯಕ್ತಿ ಒಂದೇ ನೆಗೆತಕ್ಕೆ ಹೊರಗೆ ಹಾರಿತು. ಹೋಗುವಾಗ ಹೊರಗಿನಿಂದ ರೂಮಿನ ಬಾಗಿಲನ್ನು ಎಳೆದುಕೊಂಡಿತು !

ಮನೆಯವರಿಗೆಲ್ಲಾ ಎಚ್ಚರವಾಯಿತು.

ರೇವತಿ ಭಯದಿಂದ ನಡುಗುತ್ತಿದ್ದಾಳೆ. ಆ ವ್ಯಕ್ತಿ ರೇವತಿಯನ್ನು ಕೊಲೆ ಮಾಡಲು ಬಂದಿರಲಿಲ್ಲ. ಆ ವ್ಯಕ್ತಿಯ ಉದ್ದೇಶ ಅತೀ ಭಯಾನಕ !

ಆ ವ್ಯಕ್ತಿ ಯಾರು !

(ಮುಂದುವರೆಯುತ್ತದೆ)

---

14ನೇ ಪುಟದಿಂದ

ಕುತ್ತಿಗೆ ಪಟ್ಟಿ ಹಿಡ್ಕಂಡತ್. "ಅಣ್ಣಾ ನಿನ್ನ ಕಾಲಿಗೆ ಬಿದ್ದನಣ್ಣಾ ನಿನ್ನ ದಮ್ಮಯ್ಯ ನಂಗೆ ಅಂದ್ ನೀನಂತ ಗೊತ್ತಾತ್ಲೆ. ನಂಗೆ ಅಂದ್ ಲೋ ಬಿ.ಪಿ. ಇತ್. ಹಂಗೆ ಗೊತ್ತಾಗದೆ ನಿಂಗೆ ಹೊಡ್ದ್ ಬುಟ್ಟೆಂತ ದಮ್ಮಯ್ಯಗುಡ್ಡೆ ಹಾಕಿತ್. ಅಯ್ಯಣ್ಣಂಗೆ ಹಲ್ ಮುರ್ಕಂಡ ದಿನದ ಬೇನೆ ಗ್ಯಾನಾತ್. ಅಂದ್ ನಿಂಗೆ ಲೋ ಬಿ.ಪಿ. ಇತ್ತಾಲ್ಲಾ? ಇಂದಾ ನಂಗೆ ಇಂದ್ ಹೈ ಬಿ.ಪಿ. ತೇಳಿ ಎಡ್ಡಕಡೆ ಕೆಮಿಚಂಡೆಗೆ ಸೇರ್ಸಿ ಬುಟ್ಟಿತ್. ಚಡಾವ್ ಹತ್ತಕನ ಲಾರಿ ಬುರುಗುಟ್ಟುವಂಗೆ ಲೋಕಯ್ಯನ ತಲೆ ಒಳಗೆ ಗುಂಯ್‌ಗುಟ್ಟಿತಾ ಇರಕನ ಮತ್ತೊಂದ್ ಬುಟ್ಟಿತ್. ಎರಡ್ ಪೆಟ್ಟಿಗೆ ಅಯ್ಯಪ್ಪಾ... ಅಯ್ಯಣ್ಣಾ ನೀರ್‌ತ ಕೇಳ್ತ್. ಬಿದ್ದಲ್ಲಿಗೆ ಹೋಗಿ ನಿಂಗೆ ಲೋ ಬಿ.ಪಿ. ನಂಗೆ ಹೈ ಬಿ.ಪಿ. ತೇಳಿ ಕಂಡೇ ಒದ್ದತ್.

ಇಂದ್ ಲೋಕಯ್ಯಂಗೆ ಎಡಕಿವಿ ಕೇಳ್ತಾ ಇಲ್ಲೆ. ಅಯ್ಯಣ್ಣಂಗೆ ಮುಂದೆದ್ ಎರಡ್ ಹಲ್ ಇಲ್ಲೆ. ಆಹಾ! ಎಂಥಾ ಜೂನ್ ಜುಲೈಗ !!

ನಿಮ್ಮಲ್ಲೂ ಇಂಥಾ "ತಿಂಗಗ" ಒಳೊನಾ?

ಬಿ. ಆರ್ ಜೋಯಪ್ಪ, ಮಡೆ.

---

## ಗಾದೆಗಳು

ಅಜ್ಜಿಗೆ ಅರಿವೆ ಚಿಂತೆ, ಮೊಮ್ಮಗಳಿಗೆ ಗಂಡನ ಚಿಂತೆ

ಅಕ್ಕಿ ಮೇಲೆ ಆಸೆ, ನೆಂಟರ ಮೇಲೆ ಪ್ರೀತಿ

## ಕೊಡಗು ಸಂಗಾತಿಯ ಪೆರಾಜೆ ಕೇಂದ್ರದ ಸಂಚಾಲಕರಾಗಿ/ಏಜೆಂಟರಾಗಿ ಮೆಲ್ತ್ತಡೆ. ಆರ್. ಗೋಪಾಲ್ ಆಯ್ಕೆ. ಓದುಗರ ಸಹಕಾರ ನಿರೀಕ್ಷೆ



ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಸಂಚಾಲಕರಾಗಿ/ ಏಜೆಂಟರಾಗಿ ಮೆಲ್ತ್ತಡೆ ಗೋಪಾಲ್‌ರವರನ್ನು ಅವರ ವಿನಂತಿ ಮೇಲೆ ಆಯ್ಕೆ ಮಾಡಲಾಗಿದೆ. ಪೆರಾಜೆ, ಸಂಪಾಜೆ, ಚೆಂಬು ಗ್ರಾಮಗಳಿಗೆ ನೀಮಿತವಾಗಿ ವರದಿ, ಕಲೆಕ್ಷನ್ ಜಾಹೀರಾತು ಇತ್ಯಾದಿಯಾಗಿ ಕೆಲಸ ನಿರ್ವಹಿಸಲು ಅನುವು ನೀಡಲಾಗಿದೆ. ಸಹೃದಯ ಓದುಗರು ಸಹಕರಿಸುವಂತೆ ಕೋರಿಕೆ.

**ಸಂಪಾದಕಿ**

## ಕೊಡಗು ಸಂಗಾತಿಯ ಮರಗೋಡು ಕೇಂದ್ರದ ಸಂಚಾಲಕರಾಗಿ/ಏಜೆಂಟರಾಗಿ ಮಾಳಿಗೆಮನೆ ಜನಾರ್ಧನ ಆಯ್ಕೆ, ಓದುಗರ ಸಹಕಾರ ನಿರೀಕ್ಷೆ.



ಕೊಡಗು ಸಂಗಾತಿ, ಪಾಕ್ಷಿಕ ಪತ್ರಿಕೆಯ ಸಂಚಾಲಕರಾಗಿ, ಏಜೆಂಟ್ ಆಗಿ ಮಾಳಿಗೆಮನೆ ಜನಾರ್ಧನರವರನ್ನು ಅವರ ವಿನಂತಿ ಮೇಲೆ ಆಯ್ಕೆ ಮಾಡಲಾಗಿದೆ. ಮರಗೋಡು, ಐಕೊಳ, ಕಟ್ಟೆ ಮಾಡು, ಹೊಸ್ಕೇರಿ, ಗ್ರಾಮಗಳಿಗೆ ಸೀಮಿತವಾಗಿ ವರದಿ, ಕಲೆಕ್ಷನ್, ಜಾಹೀರಾತು ಇತ್ಯಾದಿಯಾಗಿ ಕೆಲಸ ನಿರ್ವಹಿಸಲು ಅನುವು ನೀಡಲಾಗಿದೆ. ಸಹೃದಯ ಓದುಗರು ಸಹಕರಿಸುವಂತೆ ಕೋರಿಕೆ.

**ಸಂಪಾದಕಿ**



ಡಿ. ಕೆದಂಬಾಡಿ ಪಿ. ಮುತ್ತಣ್ಣ
ಜನನ : 8-3-1916 ಮರಣ : 17-2-1997

## 3ನೇ ವರ್ಷದ ಪುಣ್ಯ ಸ್ಮರಣೆ

ನೀವು ನಮ್ಮನ್ನಗಲಿ ತಾರೀಖು 17-2-2000ಕ್ಕೆ 3ವರ್ಷಗಳು ಸಂದರೂ ನಿಮ್ಮ ಸವಿನೆನಪು ಹಾಗೂ ನಿಮ್ಮ ಆಶೀರ್ವಾದಗಳು ನಮ್ಮಲ್ಲಿ ಅಚ್ಚ ಹಸುರಾಗಿದೆ. ನಿಮ್ಮ ದಿವ್ಯಾತ್ಮಕ್ಕೆ ಭಗವಂತನು ಚಿರಶಾಂತಿ ಕರುಣಿಸಲಿ ಎಂದು ಮನಪೂರ್ವಕ ಪ್ರಾರ್ಥಿಸುವ

**ಮಕ್ಕಳು ಕುಸುಮ, ಬಿಸಜಾಕ್ಷಿ, ಕೃಷ್ಣಾಜಿ, ಭವಾನಿ, ಹರೀಶ, ಕುಮುದ**
**ಅಳಿಯಂದಿರು, ಸೊಸೆಯಂದಿರು, ಮೊಮ್ಮಕ್ಕಳೆಲ್ಲರೂ**
**ಹಾಗೂ ಹಿರಿಯ ಮೊಮ್ಮಗಳಾದ ಕಾಯರ್‌ಕಟ್ಟೆ ಸವಿತ ತೀರ್ಥಾನಂದ**

## ಚಿರಸ್ಮರಣೆ



ಕರ್ಣೆಯ್ಯನ ಪೊನ್ನಪ್ಪ
ಮರಣ : 18-2-1990

ನೀವ್ ದಿನಾಂಕ 18-2-1990ರಲ್ಲಿ ನಮ್ಮನ್ನಗಲಿ ವೈಕುಂಠವಾಸಿಯಾದಿರಿ. ಇಂದ್ ನಿಮ್ಮ ಸವಿನೆನಪ್ ಮಾತ್ರ ನಮ್ಮಲ್ಲಿ ಉಳ್‌ದುಟ್ಟು. ನಿಮ್ಮ ಆದರ್ಶ ಗುಣಾಗ ನಮಿಗೆ ದಾರಿದೀಪ ಆಗಿಟ್ಟು. ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನ ಪರಮಾತ್ಮ ನೀಡಲಿತ್ತೆಳಿ ಬೇಡಿಕಂಡವೆ.

**ಮಕ್ಕಳು, ಮೊಮ್ಮಕ್ಕಳು**
**ಸೊಸೆಯಂದಿರು/ಅಳಿಯಂದಿರು,**
**ಹೊಸಪಟ್ಟಗ್ರಾಮ, ವಯ ಕುಶಾಲನಗರ**

## ಸ್ವಾತಂತ್ರ್ಯದ ಅಂಚಿನಲ್ಲಿ ಮತ್ತು ನಂತರ ಉನ್ನತ ವಿದ್ಯೆ ಮತ್ತು ಹುದ್ದೇಗೇರಿದ ನಮ್ಮ ಅರೆಭಾಷಿಕ ಜನಾಂಗದ ಮೊಟ್ಟ ಮೊದಲಿಗರು (ಸಂಪುಟ 4, ಸಂಚಿಕೆ 3ಕ್ಕೆ ಪೂರಕವಾಗಿ)

| | | |
|---|---|---|
| ಶ್ರೀ ದಂಬೆಕೊಡಿ ಸುಬ್ರಾಯ ಆನಂದ ಸಿ. ಎ., 1969 | - | ಜನರಲ್ ಮ್ಯಾನೇಜರ್. ಕೆ.ಎಸ್.ಎಫ್.ಸಿ., (ಅಕೌಂಟೆನ್ಸಿ) |
| ವಿಂಗ್ ಕಮಾಂಡರ್ ದಿ. ಪೂಜಾರಿ ಮಂದಣ್ಣ ಪುಟ್ಟಯ್ಯ | - | ಏರ್ ಫೋರ್ಸು ಪೈಲಟ್ (Defence) |
| ದಿ. ಪೊಕ್ಕುಲಂಡ್ರ ಚೆಂಗಪ್ಪ | - | A.C.F. (Forestry) |
| ಚೆಟ್ಟಿಮಾಡ ಕೃಷ್ಣಪ್ಪ ಆನಂದ, M.D. | - | ಪ್ರಿನ್ಸ್‌ಪಾಲ್, ಬೆಂಗಳೂರು, ಮೆಡಿಕಲ್ ಕಾಲೇಜು (Retd.) |
| ಶ್ರೀಮತಿ ಕೆ.ಎಸ್. ಇಂದಿರ ಅಪ್ಪಯ್ಯ, B.Sc., B.Ed. (Retd) | - | Education, (Director of PUC Board) D.D.P.I. Kodagu District |
| ಶ್ರೀ ನಿಡ್ಯಮಲೆ ಎ. ಮಾದವ B.E., M.Tech, Senior Project Manager | - | Marine Engineering, Engineers India Ltd., New Delli, (Oceanography) ಸಾಗರ ವಿಜ್ಞಾನಿ. |
| ದಿ. ಡಾ. ವೀರಪ್ಪ ಗೌಡ | - | ವೆಟರಿನರಿ ಫೀಲ್ಡ್‌ನಲ್ಲಿ ಮೊದಲಿಗರು |
| ಶ್ರೀ ಕುರಿಯ ಚಾಮಯ್ಯ | - | ಕರ್ನಾಟಕ ರಾಜ್ಯ ಕಾನೂನು ಕಾರ್ಯದರ್ಶಿ |
| ದಿ. ಕೋರನ ದೇವಯ್ಯ | - | ಕೊಡಗು ರಾಜ್ಯದಲ್ಲಿ ಅರೆಭಾಷಿಕರ ಮೊದಲ ಡೆಪ್ಯುಟಿ ಸ್ಪೀಕರ್. |
| ಶ್ರೀ ದಂಬೆಕೋಡಿ ಅಪ್ಪಚ್ಚು ಚಿಣಪ್ಪ | - | ಕರ್ನಾಟಕ ಸರ್ಕಾರದಲ್ಲಿ ಮೊದಲ ಮಂತ್ರಿ. |
| ದಿ. ಪಾಂಡನ ದೇವಪ್ಪ ಸುಬ್ಬಯ್ಯ | - | ಮೊದಲ ತಾಲೂಕು ಬೋರ್ಡ್ ಅಧ್ಯಕ್ಷ. |
| Col. ಕೆದಂಬಾಡಿ. ಐಯ್ಯಪ್ಪ | - | ಭಾರತೀಯ ಭೂದಳದಲ್ಲಿ ಪ್ರಥಮ ಕರ್ನಲ್ |
| ಶ್ರೀಮತಿ ಕೋಳುಮುಡಿಯನ ಪಾರ್ವತಿ ರಾಮಯ್ಯ | - | ಪ್ರಥಮ ಮಹಿಳಾ ತಾಲೂಕು ಬೋರ್ಡ್ ಸದಸ್ಯೆ (ಮಡಿಕೇರಿ) |

**ಸಂಗಾತಿ ಸಾಧ್ಯವಿರುವಷ್ಟು ಪ್ರಯತ್ನಿಸಿ ಸಂಗ್ರಹಿಸಿದೆ. ಉಳಿದಿದ್ದರೆ ದಯವಿಟ್ಟು ಸಂಗಾತಿಗೆ ತಿಳಿಸುವುದು**

**ಸಂಪಾದಕಿ**

## 2000 ಮಿಲ್ಲೆನಿಯಂನ ಪ್ರಥಮ ಹರಿಸೇವೆ

ತಾರೀಖ್ 12-2-2000 ಲಿ ಅವಂದೂರ್ ಗ್ರಾಮದ ಪಟ್ಟಡ ಕುಟುಂಬಸ್ತರ ಐನ್‌ಮನೆಲಿ ಕುಲದೈವ ಶ್ರೀ ವೆಂಕಟರಮಣ ಸ್ವಾಮಿಯ ಘನ ಹರಿಸೇವೆ ಮತ್ತೆ ಕೆಂಚಿರಾಯನ ಪೂಜೆ ಬಹಳ ಲಾಯ್ಕಾಗಿ ನಡ್‌ದ್‌ದಲ್ಲದೆ ಸಾವಿರಾರು ಭಕ್ತಾದಿಗ ಬಂದ್ ಪ್ರಸಾದ ಸೀಕರಿ ದೈವ ಕೃಪೆಗೆ ಪಾತ್ರರಾಗೋಳೊ.

**ವರದಿ : ಪಟ್ಟಡ ರಶ್ಮಿ ಉಲ್ಲಾಸ, ಅವಂದೂರು**

## ಚಂದದಾರರಿಗೆ ತಿಳುವಳಿಕೆ

ಪತ್ರಿಕೆಯ ವಾಯಿದೆ ದಿನಾಂಕ ಮೀರಿದ ತಕ್ಷಣವೇ ನವೀಕರಿಸುವ ಇರಾದೆಯನ್ನು ಹೊಂದಿದವರಾಗಿ ನಗದು /ಡಿಡಿ/ಮನಿಆರ್ಡರ್ ಮೂಲಕ ಮಾತ್ರ ವ್ಯವಹಾರವಿರಲಿ. ಮೈಸೂರಿನ ಸ್ಥಳೀಯರು ಚೆಕ್‌ಗಳಲ್ಲಿ ವ್ಯವಹರಿಸಬಹುದು.

**ಸಂಪಾದಕಿ**

## ನಿಧನ

ಕಟ್ಟೆಮಾಡು ಗ್ರಾಮದ ತೋಟಂಬೈಲು ಈರಪ್ಪನವರು ದಿನಾಂಕ 13-1-2000ದಂದು ವೈಕುಂಠವಾಸಿಯಾದರು. ಇವರಿಗೆ 80 ವರ್ಷ ಪ್ರಾಯವಾಗಿದ್ದು, ಇವರು ಪತ್ನಿ ನಾಲ್ವರು ಪುತ್ರರು ಮತ್ತು ಇಬ್ಬರು ಪುತ್ರಿಯರನ್ನು, ಮೊಮ್ಮಕ್ಕಳನ್ನು ಅಲ್ಲದೆ ಅಪಾರ ಬಂಧು ಬಳಗದವರನ್ನು ಅಗಲಿದ್ದಾರೆ. ಶ್ರೀಯುತರ ಅಗಲಿಕೆಗೆ ಸಂಗಾತಿ ಸಂತಾಪವನ್ನು ಸೂಚಿಸುತ್ತದೆ.

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.